# ಕೊಡಗು  ಸಂಗಾತಿ

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಗೌಡ ಕನ್ನಡದ ಏಕೈಕ ಪಾಕ್ಷಿಕ ಪತ್ರಿಕೆ

K.R.N.N. 240 ಸಂಪುಟ : 2 ಸಂಚಿಕೆ : 23 ಡಿಸೆಂಬರ್ 1 ರಿಂದ 15–1998 ಪುಟಗಳು : 24 ರೂ. 5



[ಲೇಖನ ಒಳಪುಟಗಳಲ್ಲಿ]

1982 ರಲ್ಲಿ ರಾಜ್ಯಪಾಲ ವಿ. ನಾರಾಯಣ್‌ರವರಿಂದ ರಾಷ್ಟ್ರಪತಿಗಳ ಚಿನ್ನದ ಪದಕವನ್ನು ಸ್ವೀಕರಿಸುತ್ತಿರುವ ಕುದುಪಜೆ ಭೈರಪ್ಪನವರು

## ಕೃತಜ್ಞತೆಗಳು

ನಮ್ಮ ಪೂಜ್ಯರಾದ ಶ್ರೀ ಹೊಸೂರು **ಡಿ. ಗಣಪತಿ** ಯವರು ದಿನಾಂಕ **23-11-98**ರ ಸೋಮವಾರ ಕೋಪಟ್ಟಿ ಗ್ರಾಮದ ನಮ್ಮ ಮನೆಯಲ್ಲಿ ದೈವಾಧೀನ ರಾದ ಸಂದರ್ಭದಲ್ಲಿ ನಮ್ಮಲ್ಲಿಗೆ ಬಂದು ನಮ್ಮನ್ನು ಸಂತೈಸಿ, ಅಂತ್ಯಕ್ರಿಯೆಯಲ್ಲಿ ಭಾಗವಹಿಸಿದ ಸರ್ವರಿಗೂ ನಮ್ಮೆಲ್ಲರ ಕೃತಜ್ಞತೆಗಳು. ಅಲ್ಲದೆ ಮೃತರ ತಿಥಿ ಕರ್ಮಾಂತರವನ್ನು ದಿನಾಂಕ **9-12-98** ನೇ ಬುಧವಾರ ಕೋಪಟ್ಟಿ ಗ್ರಾಮದ ನಮ್ಮ ಮನೆಯಲ್ಲಿ ಏರ್ಪಡಿಸಿದ್ದು, ಕಾರಣಾಂತರದಿಂದ ಬಂಧು-ಮಿತ್ರರಿಗೆ ಆಹ್ವಾನ ಪತ್ರ ತಲುಪದೇ ಇದ್ದಲ್ಲಿ ಇದನ್ನೇ ಆಹ್ವಾನ ಪತ್ರವೆಂದು ಪರಿಗಣಿಸಿ, ಬಂದು ಮೃತರ ಆತ್ಮಕ್ಕೆ ಶಾಂತಿ ಯನ್ನು ಕೋರಬೇಕಾಗಿ ವಿನಂತಿ.

**ಹೊಸೂರು ಕಾವೇರಮ್ಮ (ಪತ್ನಿ)**
**ಮತ್ತು ಮಕ್ಕಳು.**

## ವರ ಬೇಕಾಗಿದೆ

ವಯಸ್ಸು 24, 5-3' ಎತ್ತರ, ಪಿ. ಯು. ಸಿ./ ಡಿಪ್ಲೋಮಾ ಓದಿ, ಖಾಸಗಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ಕೊಡಗು ಗೌಡ ಯುವತಿಗೆ, ಸ್ವಜಾತಿಯ ಸರ್ಕಾರಿ/ಖಾಸಗಿ ಕೆಲಸದಲ್ಲಿರುವ ವರ ಬೇಕಾಗಿದೆ. ಸಂಪರ್ಕಿಸಿ.

**C/o ಕೊಡಗು ಸಂಗಾತಿ,**
ನಂ. 35, 'ಸವಿತಾ ನಿಲಯ'
4ನೇ ಬ್ಲಾಕ್, 1ನೇ ಕ್ರಾಸ್,
ಜಯಲಕ್ಷ್ಮಿಪುರಂ, ಮೈಸೂರು.
ದೂರವಾಣಿ : **516771**

---

**ತೃತೀಯ ವರ್ಷಕ್ಕೆ ಪಾದಾರ್ಪಣೆ ಮಾಡುತ್ತಿರುವ**
**ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆಗೆ ಶುಭಾಶಯಗಳು**

**ಶ್ರೀ ತಡಿಯಪ್ಪನ ಕುಮಾರ ಜಯ** ಮತ್ತು
**ಶ್ರೀಮತಿ ಪದ್ಮಾವತಿ** ಹಾಗೂ
**ಕು|| ಭವ್ಯ, ಕು|| ಕಿಶೋರ್,**
**ಮೈಸೂರು.**

---

# ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**
ಗೌರವ ಸಂಪಾದಕ :
**ಪಟ್ಟಡ ಎಂ. ಪ್ರಭಾಕರ**
ಮುದ್ರಕರು :
**ಮುಜ್ಜಾಂಡ್ರ ಕೆ. ತಮ್ಮಯ್ಯ**

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :
**ಕೊಡಗು ಸಂಗಾತಿ**
ನಂ. 35, **"ಸವಿತಾ ನಿಲಯ"**
1ನೇ ಕ್ರಾಸ್, 4ನೇ ಬ್ಲಾಕ್,
ಡಿವಿಜನಲ್ ಟೆಲಿಕಾಂ ಕಛೇರಿ ಹತ್ತಿರ,
ಜಯಲಕ್ಷ್ಮಿಪುರಂ, ಮೈಸೂರು-12.
ಫೋನ್ : 0821/516771

**-ಸಂಪರ್ಕಿಸುವ ವಿಳಾಸ-**

**ಮಣಿ ನಂಗಾರ್**
C/o ನಂಗಾರ್ ಆಡಿಯೋ & ವೀಡಿಯೊ
ಹೊಳ್ಳ ಕಾಂಪ್ಲೆಕ್ಸ್, ಮಂಗಳೂರು ರಸ್ತೆ,
ಚಿಕ್ಕಪೇಟೆ, ಮಡಿಕೇರಿ-571 201
ದೂರವಾಣಿ : 08272/29372

**ಬೈತಡ್ಕ ಜಾನಕಿ ಬೆಳ್ಯಪ್ಪ**
ನಂ. 16, ಎಲ್.ಐ.ಸಿ. ಹತ್ತಿರ
ರೇಸ್ ಕೋರ್ಸ್ ರಸ್ತೆ, ಮಡಿಕೇರಿ
ದೂರವಾಣಿ : 08272/28047

**ಕುಂಭಗೌಡನ ಸೋಮಣ್ಣ**
ಮಯೂರ ಕೋಲ್ಡ್ ಸ್ಟೋರೇಜ್
ಮುಖ್ಯ ರಸ್ತೆ, ಕುಶಾಲನಗರ-571237

**ಅಮ್ಮಾಜೀರ ಪೊನ್ನಪ್ಪ ಅಥವಾ**
**ಕಲ್ಲುಮುಟ್ಲು ಬಸಪ್ಪ**
20, 1ನೇ ಮೈನ್, 4ನೇ ಕ್ರಾಸ್
ಸಾಕಮ್ಮ ಗಾರ್ಡನ್, ಬಸವನಗುಡಿ,
ಬೆಂಗಳೂರು-04
ದೂರವಾಣಿ-080/642822


# ಒಳನೋಟ

ಪುಟಗಳು



## ಅರೆ ಭಾಷಿಕ ವಿಭಾಗ




## ಚಂದಾ ವಿವರ

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ಅರ್ಧ ವಾರ್ಷಿಕ | : | 60 ರೂ. |
| ವಾರ್ಷಿಕ ಚಂದಾ | : | 120 ರೂ. |

# ಸಂಪಾದಕೀಯ :

## ಅರೆಭಾಷೆ ಮತ್ತು ಅಕಾಡೆಮಿ

1947ಕ್ಕಿಂತ ಹಿಂದೆ ಶಾಲಾ ವಿದ್ಯಾರ್ಥಿಗಳು ತಮ್ಮ ಗ್ರಾಮಗಳಿಂದ ಆರೇಳು ಮೈಲಿ ದೂರದಿಂದ ನಡೆದುಕೊಂಡೇ ಮಡಿಕೇರಿಯ ಸೆಂಟ್ರಲ್ ಹೈಸ್ಕೂಲಿಗೆ ಬರುವ ಪರಿಸ್ಥಿತಿ ಇತ್ತು. ಹಾಗೆ ಒಟ್ಟಾಗಿ ಸೇರಿ ಮಡಿಕೇರಿಗೆ ಬರುತ್ತಿದ್ದ ವಿದ್ಯಾರ್ಥಿಗಳು ಅಲ್ಲಿಯವರೆಗೆ ಅರೆಭಾಷೆ ಮಾತನಾಡುತ್ತಿದ್ದವರು ಮಡಿಕೇರಿಯ ಚಿಕ್ಕಪೇಟೆಗೆ ಬಂದ ನಂತರ ಒಮ್ಮಿಂದೊಮ್ಮೆಗೆ ಕನ್ನಡ ಮಾತನಾಡಲು ಪ್ರಾರಂಭಿಸುತ್ತಿದ್ದರು. ಆ ಕಾಲದಲ್ಲಿ ಗೌಡರಲ್ಲಿದ್ದ ಕೀಳರಿಮೆಯೇ ಇದಕ್ಕೆ ಕಾರಣವಾಗಿದೆ. ಆಗಿನ ಕಾಲದ ಗೌಡರ ಜನಗಣತಿಯನ್ನು, ವಿದ್ಯಾವಂತರ ಸಂಖ್ಯೆಯನ್ನು ಹೋಲಿಸಿದರೆ ನೂರಕ್ಕೆ ಒಬ್ಬನು ಸಹ ಎಸ್.ಎಸ್.ಎಲ್.ಸಿ. ಆದವರಿರಲಿಲ್ಲ. ಜನರಿಗೆ ವಿದ್ಯೆ ಇಲ್ಲದ ಸ್ಥಿತಿಯಿಂದಲೂ, ಬಡತನದಿಂದಲೂ ಕೀಳರಿಮೆಯ ಸ್ವಭಾವಕ್ಕೆ ಕಾರಣವಾಗಿತ್ತು. ಆದರೆ ಈಗ ಹಾಗಲ್ಲ. ಜನರು ಎಲ್ಲಿ ಕಂಡರೂ ಅರೆಭಾಷೆ ಮಾತನಾಡುವ ಧೈರ್ಯ ಮಾಡಿದ್ದಾರೆ. ಪ್ರಥಮವಾಗಿ 1968ರಲ್ಲಿ ಬೆಂಗಳೂರಿನ ಗೌಡ ಸಮಾಜದವರು ಗೌಡ ಸಂಸ್ಕೃತಿ ಪುಸ್ತಕವನ್ನು ಪ್ರಕಟಿಸುವ ಸಂದರ್ಭದಲ್ಲಿ ದಿ|| ಕೂಡಕಂಡಿ ಪೊನ್ನಪ್ಪನವರನ್ನು, ಹೊದ್ದೆಟೆ ಭವಾನಿಶಂಕರ್‌ರವರನ್ನು, ಕುಲ್ಲಚನ ಕಾರ್ಯಪ್ಪನವರನ್ನು ಹುರಿದುಂಬಿಸಿ ಅರೆಭಾಷೆಯಲ್ಲಿ ಪದ್ಯ ಬರೆಯಿಸಿ ಪ್ರಕಟಿಸಲಾಯಿತು. 1985ರಲ್ಲಿ ಸೂದನ ಈರಪ್ಪನವರು "ಗೌಡ ಧ್ವನಿ" ಪತ್ರಿಕೆಯನ್ನು ಬಹಳ ಶ್ರಮಪಟ್ಟು ಪ್ರಕಟಿಸಿದ್ದರು. ತದನಂತರ ಅರೆಭಾಷೆಯ ಕವನಗಳು, ಲೇಖನಗಳು ಗೌಡಂಗೆ ಸಂಬಂಧಿಸಿದ ಪ್ರಕಟಣೆಗಳಲ್ಲಿ ಪ್ರಕಟವಾಗಿದೆ. ಈಗ ಒಂದೆರಡು ವರ್ಷಗಳಿಂದ "ಕೊಡಗು ಸಂಗಾತಿ" ಪತ್ರಿಕೆಯಲ್ಲಿ ಅರೆಭಾಷೆಯ ಕವನ, ಕಥೆಗಳು ಪ್ರಕಟವಾಗುತ್ತಲೆ ಇವೆ ಇದನ್ನೆಲ್ಲಾ ಅವಲೋಕಿಸಿದರೆ ಅರೆಭಾಷೆಯ ವ್ಯಾಮೋಹ ಕುಂದುತ್ತಿಲ್ಲ. ಬದಲಾಗಿ ಅಭಿವೃದ್ಧಿಯಾಗುತ್ತಿದೆ. ಡಾ|| ಕೋಡಿ ಕುಶಾಲಪ್ಪಗೌಡರು ಅರೆಭಾಷೆಯ [ಗೌಡ ಕನ್ನಡ] ವಿಷಯದಲ್ಲಿ ಒಂದು ಮಹಾನ್ ಪ್ರಬಂಧವನ್ನು ಬರೆದು ಕೀರ್ತಿ ಗಳಿಸಿದ್ದಾರೆ. ಡಾ|| ಪುರುಷೋತ್ತಮ ಬಿಳಿಮಲೆಯವರು ಸಹ ಜಾನಪದ ಸಾಂಸ್ಕೃತಿಕ ವಿಷಯವಾಗಿ ಅಧ್ಯಯನ ಮಾಡಿದ್ದಾರೆ.

ಕೆಲವು ವಿದ್ಯಾವಂತರು ಅವರ ಮಕ್ಕಳಿಗೆ ಅರೆಭಾಷೆ ಕಲಿಸಿದರೆ ಎಲ್ಲಿ ತನ್ನ ಮಕ್ಕಳು ಅರೆಭಾಷೆಯನ್ನು ಕಲಿತು ಕಮ್ಮಿತರವಾಗಿಬಿಡುತ್ತಾರೋ ಎಂಬ ಭ್ರಮೆಯಿಂದ ಹುಟ್ಟಿದ ಮಗುವಿಗೆ ಅಪ್ಪ, ಅಮ್ಮ ಎಂದು ಕಲಿಸುವ ಬದಲು ಡ್ಯಾಡಿ, ಮಮ್ಮಿ ಎಂದು ಕರೆಯಲು ಕಲಿಸುತ್ತಾರೆ. ಯಾವನೋ ಒಬ್ಬ ಗಂಡಸು ಆದರೆ ಆತನನ್ನು ಅಂಕಲ್ ಎಂದು ಸಂಭೋದಿಸಲು ಹೇಳಿಕೊಡುತ್ತಾರೆ. ಮಗುವಿನ ದೊಡ್ಡಪ್ಪನನ್ನು ಅಂಕಲ್, ಚಿಕ್ಕಪ್ಪನನ್ನು ಅಂಕಲ್, ತನ್ನ ರಕ್ತ ಸಂಬಂಧ ಇಲ್ಲದ ನೆರೆಮನೆಯ ವ್ಯಕ್ತಿ ಅಂಕಲ್ ಆಗಿ ಮಗುವಿಗೆ ಚಿಕ್ಕಪ್ಪ ಯಾರು? ದೊಡ್ಡಪ್ಪ ಯಾರು ? ಸೋದರ ಮಾವ ಯಾರು ? ಸೋದರತ್ತೆ ಯಾರು ? ಎಂಬ ಪರಿಜ್ಞಾನವೇ ಇಲ್ಲದೆ ಎಲ್ಲರೂ ಅಂಕಲ್, ಆಂಟಿಗಳಾಗಿ ಹುಟ್ಟಿದ ಮಗು ಬೇರೆಯೇ ಒಂದು ಪ್ರಪಂಚದಲ್ಲಿ ಬೆಳೆಯುತ್ತದೆ. ಇದು ವ್ಯಕ್ತಿಗಳ ವ್ಯಕ್ತಿಗತ ಅಭಿಪ್ರಾಯ. ಇದನ್ನು ತಡೆಗಟ್ಟಲು ಸಮಾಜದಿಂದ ಸಾಧ್ಯವಿಲ್ಲ. ಅದನ್ನು ವ್ಯಕ್ತಿಗಳು ಯೋಚಿಸಿದ್ದು ಸರಿಯೋ ಅಥವಾ ತಪ್ಪೋ ಎಂಬ ನಿರ್ಧಾರವನ್ನು ಅವರವರಿಗೆ ಬಿಡುವುದು ಒಳ್ಳೆಯದು.

ಅರೆಭಾಷೆಯ ದುಸ್ಥಿತಿಯನ್ನು ಕಂಡು ಜನಾಂಗದ ಸಾಕಷ್ಟು ಜನರ ಹೃದಯ ಮಿಡಿದಿದೆ. ಇದೇ ರೀತಿ ಹೃದಯ ಮಿಡಿತ ಉಳ್ಳವರೆಲ್ಲಾ ಸೇರಿ, ಒಂದು ಅರೆಭಾಷೆ ಅಕಾಡಮಿ ಮಾಡಬೇಕು. ಇದರಲ್ಲಿ ಗೌಡರಲ್ಲದೆ ಅರೆಭಾಷೆ ಮಾತನಾಡುವ ಕುಂಬಾರರು, ಹಾಲಕ್ಕಿ ಒಕ್ಕಲಿಗರು, ಜೇನು ಕುರುಬರು, ಎರವರು, ಸೋಲಿಗರು, ಹವಿಕರು ಸೇರಬೇಕು. ಅರೆಭಾಷೆಯ ಅಭಿವೃದ್ಧಿಗಾಗಿ ಸಮ್ಮೇಳನಗಳನ್ನು, ಕವಿಗೋಷ್ಠಿಗಳನ್ನು ಕರೆಯಬೇಕು. ಸರ್ಕಾರಕ್ಕೆ ತಮ್ಮದೊಂದು ಭಾಷೆ ಇದೆ. ಆ ಭಾಷೆಗೊಂದು ಅಕಾಡಮಿ ಬೇಕೆಂದು ಕೇಳಬೇಕು. ಕೊಡವ ಭಾಷೆ, ತುಳುಭಾಷೆ, ಕೊಂಕಣಿ ಭಾಷೆಗಳಿಗೆ ಬೇರೆ ಬೇರೆ ಅಕಾಡಮಿಗಳಿರುವ ಹಾಗೆ ಅರೆಭಾಷೆಗೂ ಒಂದು ಅಕಾಡಮಿ ಆಗಬೇಕೆಂದು ಹೋರಾಟ ನಡೆಸಬೇಕು. ಈಗಾಗಲೇ ಬ್ಯಾರಿ ಜನಾಂಗದವರು ಸಹ ಪ್ರತ್ಯೇಕ ಅಕಾಡೆಮಿಗೆ ಒತ್ತಾಯಿಸಿದ್ದಾರೆ. ನಮ್ಮವರಲ್ಲಿ ಹೋರಾಟಗಾರರ ಕೊರತೆ ಇದೆ. ಆ ಕೊರತೆಯನ್ನು ವಿದ್ಯಾವಂತ ಯುವಕರು ತುಂಬಬೇಕು.

ಇತ್ತೀಚಿನ ದಿನಗಳಲ್ಲಿ ಬೆಂಗಳೂರಿನ ಕಾವೇರಿನಾಡು, ಮಡಿಕೇರಿಯ ದಸರ ಹಾಗೂ ಬೆಂಗಳೂರಿನ ಕೊಡಗು ಮತ್ತು ದ. ಕ. ಗೌಡ ಸಮಾಜ ಮತ್ತು ಕೊಡಗಿನ ಹಲವು ಕಡೆಗಳಲ್ಲಿ ಧ್ವನಿಸುರುಳಿ ಮಾಡಿ ಹಾಡಿಸಿ ಕುಣಿಸಿದ ಕವಿ ಹೊದ್ದೆಟೆ ಭವಾನಿಶಂಕರ್ ಹಾಗೂ ವ್ಯವಸ್ಥಾಪಕ ಶ್ರೀ ಅಮ್ಮಾಜೀರ ಪೊನ್ನಪ್ಪನಂತವರಿಗೆ ಪ್ರೋತ್ಸಾಹ ಕೊಟ್ಟು ಅಂತಹ ಧ್ವನಿ ಸುರುಳಿಯು ಪ್ರತಿ ಮನೆ ಮನೆಗಳಲ್ಲೂ ಹಾಡುವಂತಾದರೆ ಅರೆಭಾಷೆ ಖಂಡಿತ ಜೀವಂತವಾಗಿ ಅಭಿವೃದ್ಧಿಯಾಗುವುದರಲ್ಲಿ ಸಂಶಯವೇ ಇರುವುದಿಲ್ಲ. ವಿದ್ಯಾವಂತ ಯುವಕರು ಡಾ||

[4ನೇ ಪುಟ ನೋಡಿ]

# 1981ರಲ್ಲಿ ರಾಷ್ಟ್ರಪತಿಗಳ ಚಿನ್ನದ ಪದಕ ಪಡೆದ ಧೀಮಂತ ಪೊಲೀಸ್ ಅಧಿಕಾರಿ ಶ್ರೀ ಕುದುಪಜೆ ದೇವಯ್ಯ ಭೈರಪ್ಪ (ನಿವೃತ್ತ)

ಪಟ್ಟಡ ಪ್ರಭಾಕರ್

ಕೊಡಗು ಜಿಲ್ಲೆ ಮಡಿಕೇರಿ ತಾಲ್ಲೂಕು ಸಿಂಗತ್ತೂರು ಗ್ರಾಮದ ಕುದುಪಜೆ ದಿ|| ದೇವಯ್ಯ ಕಾವೇರಮ್ಮ ದಂಪತಿಗಳಿಗೆ ದ್ವಿತೀಯ ಪುತ್ರನಾಗಿ 26-3-1926 ರಲ್ಲಿ ಜನ್ಮತಾಳಿದರು. ಇವರು ವಿದ್ಯಾಭ್ಯಾಸವನ್ನು ಹುಟ್ಟೂರಾದ ಚೆಟ್ಟಿಮಾನಿಯಲ್ಲಿ 2ನೇ ತರಗತಿ ವರೆಗೆ ಕಲಿತು ನಂತರ ಇವರ ಅಕ್ಕ, ಭಾವ ದಿ|| ಕಾಳೇರಮ್ಮನ ಚಿಣ್ಣಪ್ಪ, ತಾಯಮ್ಮನ ಆಶ್ರಯದಲ್ಲಿ ಮಡಿಕೇರಿ ಸೆಂಟ್ರಲ್ ಹೈಸ್ಕೂಲಿನಲ್ಲಿ ಎಸ್.ಎಸ್.ಎಲ್.ಸಿ. ವರೆಗೆ ಕಲಿತು ಮುಂದೆ ಓದುವ ಅನುಕೂಲತೆಗಳಿದ್ದರೂ ವಿದ್ಯೆಗೆ ಇತಿಶ್ರೀ ಹೇಳಿ ಗೋಣಿಕೊಪ್ಪಲಲ್ಲಿ ಕ್ಲರ್ಕ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಭಾರತ ಸೇನಾ ಪಡೆಯಲ್ಲಿ ಸೇವೆ ಸಲ್ಲಿಸುವ ಆಕಾಂಕ್ಷಿ ಮಾಡಿ 1948ರಲ್ಲಿ ತನ್ನ ಸ್ನೇಹಿತನ ಜೊತೆಯಲ್ಲಿ ಮದ್ರಾಸ್ ಸ್ಟೇಟ್ ಆರುಕೋಣಂಗೆ ಹೋಗಿ ಸಿಪಾಯಿ ಆಗಿ ಭರ್ತಿ ಆದರು. ಅಲ್ಲಿ ಕೊಡಗಿನವರೇ ಆದ ಶ್ರೀ ಚೆಂಡಮಾಡ ಮೊಣ್ಣಪ್ಪನವರು ಕಮಾಂಡೆಂಟ್ ಆಗಿದ್ದರು. ಅಲ್ಪ ಅವಧಿಯಲ್ಲಿ ಐದು ಪ್ರಮೋಶನ್ ಪಡೆದು ಈ ಮಧ್ಯೆ Indian Army English Ist Class Examination ನಲ್ಲಿ ತೇರ್ಗಡೆ ಆದರು. ಆಟೋಟದಲ್ಲಿ ಪ್ರಥಮ ಸ್ಥಾನದಲ್ಲಿದ್ದರು. ಅವರ ಕೃಪೆಯಿಂದ ಇವರು ಪ್ರಮೋಶನ್ ಪಡೆಯಲು ಶಕ್ತರಾದರು. ದುರಾದೃಷ್ಟವಶತ್ ಬೆಟಾಲಿಯನ್ ಮುಚ್ಚಿಹೋದ ಕಾರಣ 1951ರಲ್ಲಿ ನಿವೃತ್ತಿ ಹೊಂದಿ ಸ್ವಂತ ಊರಿಗೆ ಮರಳಿದರು. 1951 ರಲ್ಲಿ ಮಾಜಿ ಸೈನಿಕರನ್ನು Hyderabad Special Reserve Policeಗೆ ಸೇರಲು ಪೇಪರ್‌ನಲ್ಲಿ ಜಾಹಿರಾತು ಪ್ರಕಟಿಸಿದ ಪ್ರಕಾರ ಇದನ್ನು ಮನಗಂಡು Hyderabad I.G.P.ಗೆ ಅರ್ಜಿ ಸಲ್ಲಿಸಿದರು. ಸಂದರ್ಶನಕ್ಕೆ ಕರೆ ಬಂದು ಹೈದರಾಬಾದಿಗೆ ಹೋಗಿ ಅಲ್ಲಿ ನಮ್ಮ ಜಿಲ್ಲೆಯವರೇ ಆದ ದಿ|| ಪಿ. ಎಂ. ಮೊಣ್ಣಪ್ಪನವರು ಐ.ಜಿ.ಪಿ., ಚೆಪ್ಪುಡಿರ ಸುಬ್ಬಯ್ಯನವರು ಡಿ.ಐ.ಜಿ. ಆಗಿದ್ದ ಕಾರಣ ಇವರನ್ನು ಅಸಿಸ್ಟೆಂಟ್ ಇನ್ಸ್‌ಪೆಕ್ಟರಾಗಿ ನೇಮಕ ಮಾಡಿಕೊಂಡರು. ತರಬೇತಿ ಮೂರು ತಿಂಗಳು ಆದ ಕೂಡಲೇ ಹೈದರಾಬಾದಿನ ವಿವಿಧ ಜಿಲ್ಲೆಗಳಲ್ಲಿ ಬಂಡುಕೋರರನ್ನು ಹತ್ತಿಕ್ಕುವ ಕೆಲಸದಲ್ಲಿ ಕಾರ್ಯ ನಿರ್ವಹಿಸಿದರು. ಶ್ರೀಯುತರು 1953ರಲ್ಲಿ ಭಾಗಮಂಡಲ ನಾಡು ತಾವೂರು ಗ್ರಾಮದ ಕೋಳಿಬೈಲು ದಿ|| ಬಚ್ಚಣ್ಣ ದಿ|| ತಾಯಮ್ಮನವರ ಮಗಳು ರುಕ್ಮಿಣಿಯನ್ನು ವಿವಾಹವಾಗಿ 1951 ರಿಂದ 1956ರವರೆಗೆ ಹೈದರಾಬಾದಿನಲ್ಲಿ ಸೇವೆ ಸಲ್ಲಿಸಿದ್ದಾರೆ.



ಕುದುಪಜೆ ಭೈರಪ್ಪ ದಂಪತಿಗಳು

1956ರ ನವಂಬರಿನಲ್ಲಿ ಪ್ರಾಂತ್ಯವಾರ್ ವಿಭಜನೆ ಆದ ಕಾರಣ ಇವರು ಕರ್ನಾಟಕದವರಾದ ನಿಮಿತ್ತ ಇವರನ್ನು ಇತರ ಜನರ ಜೊತೆಯಲ್ಲಿ ಪ್ರಪ್ರಥಮವಾಗಿ ಬೀದರ್ ಜಿಲ್ಲೆಗೆ ಕರೆತಂದು ಸ್ವಲ್ಪ ಸಮಯದಲ್ಲೇ ಬೆಳಗಾಂ ಜಿಲ್ಲೆಗೆ ವರ್ಗಾಯಿಸಿದರು. ಬೆಳಗಾಂನಲ್ಲಿ ಕರ್ನಾಟಕ, ಮಹಾರಾಷ್ಟ್ರ, ಗಡಿ ವಿವಾದ-ಕರ ನಿರಾಕರಣೆ ಮುಂತಾದ ಚಳುವಳಿ ಆಗಾಗ್ಗೆ ನಡೆಯುತ್ತಿದ್ದ ಪ್ರಯುಕ್ತ ಇವರ ಕಂಪನಿ ಜನರನ್ನು ಡ್ಯೂಟಿಗೆ ನಿಯೋಜಿಸಲಾಗುತ್ತಿತ್ತು. 1957ನೇ ಜನವರಿಯಲ್ಲಿ ಸಬ್‌ಇನ್ಸ್‌ಪೆಕ್ಟರ್ ಆಗಿ ಮುಂಬಡ್ತಿ ಲಭಿಸಿತು. ಒಂದು ಸಂದರ್ಭದಲ್ಲಿ ಖಾನಪುರ ತಾಲ್ಲೋಕು ಗಣಿಬೈಲು ಗ್ರಾಮದಲ್ಲಿ ರೆವಿನ್ಯೂ ಅಧಿಕಾರಿಗಳು, ಪೊಲೀಸ್ ಸಹಕಾರದೊಂದಿಗೆ ಕಂದಾಯ ವಸೂಲು ಮಾಡಲು ತೆರಳಿದಾಗ ಪೊಲೀಸ್ ಎಸ್. ಪಿ., ಶ್ರೀ ಪಿ. ಜೆ. ಲೂಯಿಸ್ ಮತ್ತು ಡಿ. ಸಿ ಶ್ರೀ ಶೇಷಾದ್ರಿಯವರು ಪ್ರಯಾಣಿಸುತ್ತಿದ್ದ ಕಾರಿಗೆ ಭಂಡುಕೋರರು ಗುಂಡು ಹಾರಿಸಿದ ನಿಮಿತ್ತ ಇವರನ್ನು 2 ಪ್ಲಾಟೂನ್ ಜನರ ಜೊತೆಯಲ್ಲಿ Combind operation ಗೆ ನೇಮಿಸಿ 3 ದಿವಸ ಕಾಡಿನಲ್ಲೇ ಉಳಿದ 2, 3 ಜನರನ್ನು ಸೆರೆಹಿಡಿಯುವಲ್ಲಿ, ಗುಂಡಿನ ಚಕಮಕಿ ಎದುರಿಸಬೇಕಾಯಿತು.

1959ರಲ್ಲಿ ಗೋವಾ ವಿಮೋಚನ ಸಮಯದಲ್ಲಿ ಕಂಪೆನಿ ಜೊತೆಯಲ್ಲಿ ಸೇನಾಪಡೆಯೊಂದಿಗೆ ಬೆಳಗಾಂ ವಿಮಾನ ನಿಲ್ದಾಣ ಮತ್ತು ಗೋವಾದಲ್ಲಿ ಕಾರ್ಯ ನಿರ್ವಹಿಸಿದರು. ಆಗಿಂದಾಗ್ಗೆ

ಇವರನ್ನು ಡ್ಯೂಟಿಗೆ ಹೊರರಾಜ್ಯಗಳಿಗೆ ಕಳುಹಿಸುತ್ತಿದ್ದ ನಿಮಿತ್ತ ಅನಿವಾರ್ಯವಾಗಿ ಶಮ್ಮಿ ಪತ್ನಿ ರುಕ್ಮಿಣಿ ಊರಿನಲ್ಲಿಯೇ ಇರಬೇಕಾಗಿ ಬಂತು. ಆ ಕಾರಣದಿಂದಲೇ ಇರಬೇಕು ಈಗ ನಿವೃತ್ತಿ ಜೀವನದಲ್ಲಿ ಅತೀ ಅನ್ಯೋನ್ಯ ದಂಪತಿಗಳಾಗಿ ಜೀವನಸಾಗಿಸುತ್ತಿದ್ದಾರೆ.

ಚೀನದವರು ಭಾರತದ ಮೇಲೆ ಆಕ್ರಮಣ ನಡೆಸಿದ ಪ್ರಯುಕ್ತ 1962ರ ಫೆಬ್ರವರಿಯಲ್ಲಿ ಕರ್ನಾಟಕದ 2 ಕಂಪನಿಗಳು ಮದ್ರಾಸಿನಿಂದ 4 ಕಂಪೆನಿಗಳ ಜೊತೆಯಲ್ಲಿ ನಾಗಲ್ಯಾಂಡಿಗೆ ಕಳುಹಿಸಿದರು. ಅಲ್ಲಿ ಜೀವದ ಹಂಗು ತೊರೆದು ಹಗಲು ರಾತ್ರಿಯೆನ್ನದೆ ಹಲವು ನಾಗ ಭಂಡುಕೋರರನ್ನು ಸೆರೆ ಹಿಡಿದು ಪ್ರಶಂಸೆಗೆ ಪಾತ್ರರಾದರು. ಹಲವು Cash Reward ಗಳನ್ನು ಪಡೆದರು. ಇವರ ಕಾರ್ಯ ವೈಕರಿಯನ್ನು ಪ್ರಶಂಸಿಸಿ ಇವರಿಗೆ ರಾಷ್ಟ್ರಪತಿಯವರಿಂದ ಕಠಿಣ ಸೇವಾ ಪದಕ ನೀಡಲಾಯಿತು. 1963ರಲ್ಲಿ ಇನ್ಸ್‌ಪೆಕ್ಟರ್ ಆಗಿ ಬಡ್ತಿ ಪಡೆದು ಕರ್ನಾಟಕದ ಬೆಂಗಳೂರಿಗೆ ಬಂದರು.

1963–64ರಲ್ಲಿ 2 ಸಲ ಕಂಪೆನಿ ಜೊತೆಯಲ್ಲಿ ಕೇರಳ ಸ್ಟೇಟಿಗೆ ಹೋಗಿ ಕರ್ತವ್ಯ ಮುಗಿಸಿ ಪ್ರಶಂಸೆ ಪತ್ರ ಪಡೆದಿದ್ದಾರೆ.

1965ರಲ್ಲಿ ಮದ್ರಾಸ್ ಸ್ಟೇಟ್‌ನಲ್ಲಿ ಹಿಂದಿ ವಿರೋಧಿ ಚಳುವಳಿಯನ್ನು ಹತ್ತಿಕ್ಕಲು 2 ಕಂಪೆನಿ ಜೊತೆಯಲ್ಲಿ ಕೊಯಂಬತ್ತೂರಿಗೆ ಹೋಗಿ 3 ತಿಂಗಳು ಸೇಲಂ, ಪೊಳ್ಳಾಚಿಯಲ್ಲಿ ಕಾರ್ಯ ನಿರ್ವಹಿಸಿದ್ದಾರೆ. ಆಗ ಅನೇಕ ಜನರಿಂಗೆ ಕಲ್ಲು ತೂರಾಟದಿಂದ, ಬಾಂಬು ಸ್ಫೋಟದಿಂದ ಗಾಯಗಳಾದರೂ ಎದೆಗುಂದದೆ ಇವರು ಧೈರ್ಯದಿಂದ ಕೈಗೊಂಡ ಕಾರ್ಯಾಚರಣೆಯು ಕಾನೂನು ಪಾಲನೆಯಲ್ಲಿ ಯಶಸ್ವಿಯಾಯಿತು. ಇದರ ನಿಮಿತ್ತ ಮದ್ರಾಸ್ ಐ. ಜಿ. ಪಿ. ಶ್ರೀ ಅರುಳ್ ಕರ್ನಾಟಕ ಪೊಲೀಸಿನ ಶಿಸ್ತು ಕಾರ್ಯಾಚರಣೆಯನ್ನು ಪ್ರಶಂಸಿಸಿ ಇವರಿಗೆ ಕಮಾಂಡೆಬಲ್ ಪ್ರಶಸ್ತಿಪತ್ರ ಮತ್ತು ನೃತ್ಯ ನಟರಾಜನ 2 ಅಡಿ ಎತ್ತರದ ಮೂಮೆಂಟೊ ಕೊಟ್ಟು ಗೌರವಿಸಿ ಬೀಳ್ಕೊಟ್ಟರು. ಅದು ಕರ್ನಾಟಕದ ಐ.ಜಿ.ಪಿ. ಆಫೀಸಿನಲ್ಲಿ ಈಗಲೂ ಇದೆ.

1965ರಲ್ಲಿ ಪಾಕಿಸ್ತಾನ ಭಾರತದ ಮೇಲೆ ಆಕ್ರಮಣ ನಡೆಸಿದ ಸಂದರ್ಭದಲ್ಲಿ ಇವರಿಗೆ ತಾತ್ಕಾಲಿಕ ಸಹಾಯಕ ಕಮಾಂಡೆಂಟ್ ಬಡ್ತಿ ನೀಡಿ 2 ಕಂಪೆನಿಗಳ ಜೊತೆಯಲ್ಲಿ ದೆಲ್ಲಿಗೆ ಕಳುಹಿಸಲಾಯಿತು. ಅಲ್ಲಿ ಒಂದು ತಿಂಗಳು ಸೇವೆ ಮಾಡಿ ಪ್ರಶಂಸೆ ಪತ್ರದೊಂದಿಗೆ ಬಂದ ನಂತರ ಇನ್ಸ್‌ಪೆಕ್ಟರಾಗಿ ಕೆಲಸ ಮಾಡಲು ಅಧಿಸೂಚನೆ ಬಂತು.

1966ರಲ್ಲಿ ಆಂಧ್ರ ಪ್ರದೇಶದ ಅನಂತಪುರ ಜಿಲ್ಲೆಯಲ್ಲಿ 2 ತಿಂಗಳು ಸೇವೆ ಸಲ್ಲಿಸಿದರು. 1968ರಲ್ಲಿ ಬಿ.ಎಸ್.ಎಫ್. ಜೊತೆಯಲ್ಲಿ ಹೆಚ್ಚಿನ ತರಬೇತಿಗಾಗಿ ಮಧ್ಯಪ್ರದೇಶದ ಇಂಡೋರಿಗೆ ಕಳುಹಿಸಿದರು. 3 ತಿಂಗಳು weapon training & jungle wa ನಲ್ಲಿ 1 ತಿಂಗಳು, M.M.G. training ಒಟ್ಟು 4 ತಿಂಗಳು ಕಠಿಣ ತರಬೇತಿ ಮುಗಿಸಿ] ಅತ್ಯಂತ ಉತ್ತಮ ಫಲಿತಾಂಶ ತಂದದ್ದು ಅಲ್ಲದೆ ಕರ್ನಾಟಕ ಪೊಲೀಸ್ ಆಫೀಸರುಗಳ ಪೈಕಿ ಪ್ರಪ್ರಥಮ ಎಂ.ಎಂ.ಜಿ. ತರಬೇತಿ ಮಾಡಿದ ಹೆಮ್ಮೆ ಇವರದು. ಐ ಜಿ ಪಿ. ಆಫೀಸಿಗೆ ಕರೆಸಿ ಇವರನ್ನು ಪ್ರಶಂಸಿಸಲಾಯಿತು. ನಂತರ ಕಾರೆಕಲ್ಲಿ [ಪಾಂಡಿಚೇರಿ] ಗೆ ಹೋಗಿ ಎಲೆಕ್ಷನ್ ಕೆಲಸ ಮುಗಿಸಿ ಆಗ ಅಲ್ಲಿದ್ದ ಲೆಫ್ಟಿನೆಂಟ್ ಗೌರ್ನರ್ ಶ್ರೀಮಾನ್ ಬಿ. ಡಿ ಜತ್ತಿಯವರಿಂದ ಪ್ರಶಂಸಾ ಪತ್ರವನ್ನು ಪಡೆದಿದ್ದಾರೆ

1969–71ರವರೆಗೆ ರಿಕ್ರೂಟಿಂಗ್ ಆಫೀಸರ್ ಆಗಿ ಸುಮಾರು 400ಜನರನ್ನು ಕರ್ನಾಟಕದಿಂದ ಕೆ ಎಸ್.ಆರ್ ಪಿ ಗೆ ಭರ್ತಿ ಮಾಡಿದ್ದಾರೆ. ಅದರಲ್ಲೂ ಕೊಡಗಿನವರನ್ನು ಹೆಚ್ಚಿನ

[13ನೇ ಪುಟ ನೋಡಿ]

## ಸಂಪಾದಕೀಯ

[2ನೇ ಪುಟದಿಂದ]

ಕುಶಾಲಪ್ಪ ಗೌಡರಂತೆ ಅರೆಭಾಷೆಯ ವಿಷಯದಲ್ಲಿ ಸಂಶೋಧನೆ ನಡೆಸಬೇಕು. ಹಳೆಗನ್ನಡ ಸಾಹಿತ್ಯಗಳಲ್ಲಿ ನಡುಗನ್ನಡ, ಅರೆಗನ್ನಡ ಶಬ್ಧಗಳನ್ನು ಕಂಡುಹಿಡಿದು ಆ ಶಬ್ಧಗಳ ನಿಘಂಟನ್ನು ತಯಾರಿಸಿ ಯುವ ಪೀಳಿಗೆಗೆ ಅವುಗಳ ಅರ್ಥವನ್ನು ಪರಿಚಯಿಸಬೇಕು. ಹೆಚ್ಚು ಹೆಚ್ಚಾಗಿ ಅರೆಭಾಷೆಯ ಸಾಹಿತ್ಯ ಕೃತಿಗಳು ತಯಾರಾಗಿ ಅರೆಭಾಷೆ ಆಡುವವರೆಲ್ಲರಿಗೂ ಲಭ್ಯವಾಗುವಂತೆ ಮಾಡಬೇಕು. ಹಿರಿಯರು ಚಿಕ್ಕ ಮಕ್ಕಳ ಜೊತೆ ಮನೆಗಳಲ್ಲಿ ಬಡವ ಬಲ್ಲಿದರೆನ್ನದೆ ಖಡ್ಡಾಯವಾಗಿ ಅರೆಭಾಷೆ ಮಾತನಾಡಬೇಕು ಯಾರೇ ಎಲ್ಲೆ ಇರಲಿ, ಎಂತೆ ಇರಲಿ ಅರೆಭಾಷೆಯನ್ನು ಆಡಲೇಬೇಕು. ಇದಕ್ಕೆ ಕಿರಿಯ ಯುವ ಸಾಹಿತಿಗಳು ಮುಂದಾಗಬೇಕು. ಇವರಿಗೆ ಬೇಕಾದ ಧನ ಸಹಾಯವನ್ನು ಸಮಾಜವು ಬರಿಸಬೇಕು. ಬರೇ ಭಾಷಣ, ಲೇಖನಗಳಿಂದ ಸಾಧ್ಯವಾಗದು. ಇದನ್ನು ನೆರವೇರಿಸಬೇಕೆಂಬ ಹೃದಯ ಮಿಡಿತ ಉಳ್ಳವರು ಒಂದಾಗುವ ಪ್ರಯತ್ನವಾಗಬೇಕು.

ಇಂದುಕೊಡಗು ಸಂಗಾತಿಗೆ ಚಿಕ್ಕ ಪುಟ್ಟ ಹಿರಿ ಕಿರಿ ಲೇಖಕರಾಗಿ ಸುಮಾರು 150 ಮಂದಿ ಬರವಣಿಗೆದಾರರ ಪಾಲಿದೆ. ಈ ಮೇಲಿನ ಅಭಿಪ್ರಾಯದಂತೆ ಅರೆಭಾಷೆ ಅಕಾಡೆಮಿಯಾಗಲು ಇಂದು ಪರಿಪಕ್ವವಾದ ಸೂಕ್ತ ಸಮಯವಾಗಿದೆ. ಇದರ ಸದುಪಯೋಗವನ್ನು ಅರೆಭಾಷಿಕರೆಲ್ಲರೂ ಜಾಣ್ಮೆಯಿಂದ ಬಳಸಿಕೊಳ್ಳುವಂತೆ ಕೊಡಗು ಸಂಗಾತಿಯು ಆಶಿಸುತ್ತದೆ. ●

# ಕೊಡಗು ಅರೆಭಾಷೆ ಗೌಡ ಜನಾಂಗದ ಕುಲಗುರು ಶ್ರೀ ವೆಂಕಟರಮಣ ದೇವರ ಹರಿಸೇವೆ

ಸಂಗ್ರಹ : ಬೈತಡ್ಕ ಜಾನಕಿ ಬೆಳ್ಯಪ್ಪ,
ಸಂಚಾಲಕಿ, ಕೊಡಗು ಗೌಡ ಮಹಿಳಾ ಒಕ್ಕೂಟ.

ಕೊಡಗು ಜಿಲ್ಲೆಯಲ್ಲಿ ಅರೆಭಾಷೆ [ಅರೆಗನ್ನಡ] ಯನ್ನಾಡುವ ಗೌಡ ಜನಾಂಗದವರ ಪೂರ್ವಜರು ಸುಮಾರು ಐದು ಶತಮಾನಗಳ ಹಿಂದಿನಿಂದಲೂ ಶ್ರೀ ತಿರುಪತಿ ವೆಂಕಟರಮಣ ಸ್ವಾಮಿಯನ್ನು ತಮ್ಮ ಕುಲದೇವರನ್ನಾಗಿ ಸ್ವೀಕರಿಸಿ ಆರಾಧಿಸುತ್ತಾ ಬರುತ್ತಿರುವುದು ವಿಜಯನಗರ ಸಾಮ್ರಾಜ್ಯದ ಇತಿಹಾಸದ ಮಠಗಳಿಂದ ತಿಳಿಯುತ್ತದೆ. ಹತ್ತು ಕುಟುಂಬ ಹದಿನೆಂಟು ಗೋತ್ರಕ್ಕೆ ಸೇರಿದ ಇವರ ಶುಭ ಕಾರ್ಯಗಳ ಪೈಕಿ ಬಹು ಪ್ರಮುಖವಾದ ಮತ್ತು ಸಾಂಪ್ರದಾಯಿಕ ಬದ್ಧವಾದ ಶ್ರೀ ವೆಂಕಟರಮಣ ದೇವರ ಹರಿಸೇವೆಯು ಒಂದು. ಇದನ್ನು ಸರ್ವ ಕುಟುಂಬದ ಸದಸ್ಯರೆಲ್ಲರೂ ಸೇರಿ ಪ್ರತಿ ಐದು ಅಥವಾ 7 ವರ್ಷಗಳಿಗೊಮ್ಮೆ ನೆರವೇರಿಸುತ್ತಾ ಬಂದಿರುತ್ತಾರೆ.

ಗೌಡ ಜನಾಂಗದ ಪ್ರತೀ ಕುಟುಂಬಕ್ಕೂ ಐನ್ ಮನೆ [ದೊಡ್ಡ ಮನೆ] ಎಂಬುದು ಇರುತ್ತದೆ. ಈ ಐನ್ ಮನೆಯ ನಡು ಬಾಡೆಯಲ್ಲಿ ದೇವರಿಗೆ ದೀಪ ಇಡುವ ನೆಲ್ಲಕ್ಕಿಯಲ್ಲಿ ನಿತ್ಯ ಬೆಳಿಗ್ಗೆ ಮತ್ತು ಸಂಜೆ ಶ್ರೀ ವೆಂಕಟರಮಣ ದೇವರ ಭಾವ ಚಿತ್ರವನ್ನು ಇಟ್ಟು ಪೂಜಿಸುತ್ತಾರೆ. ಕುಟುಂಬದ ಹರಕೆ ಹಣವನ್ನು ಮುಡುಪು [ಭಂಡಾರ ಪೆಟ್ಟಿಗೆ] ನಲ್ಲಿಟ್ಟು ಬೀಗ ಮುದ್ರಿಸಿ ಐನ್ ಮನೆಯ ಅಟ್ಟ [ಉಪ್ಪರಿಗೆ] ಯಲ್ಲಿ ಯಾರ ಕೈಗೂ ಎಟುಕದಂತೆ ನೇತು ಹಾಕುತ್ತಾರೆ. ಹೀಗೆ ಕಾಲಾನುಕಾಲದಿಂದ ಕೂಡಿಟ್ಟ ಹರಕೆ ಹಣವನ್ನು ತಿರುಪತಿ ತಿಮ್ಮಪ್ಪನ ಹುಂಡಿಗೆ ಹಾಕಬೇಕಾಗಿರುವುದರಿಂದ ಸದ್ರಿ 'ಮುಡುಪು ಹಣಕ್ಕೆ' ಪೂಜೆ ಸಲ್ಲಿಸಿ ವಿಜೃಂಭಣೆಯಿಂದ ದೇವರನ್ನು ಆರಾಧಿಸುವುದೇ 'ಹರಿಸೇವೆ' ಎಂದು ತಿಳಿಯಲಾಗಿದೆ. ವೈವಿಧ್ಯಮಯ ರೀತಿಯಲ್ಲಿ ಆಚರಿಸುವ ಹರಿಸೇವೆಗಳಲ್ಲಿ 'ಹರಿಸೇವೆ' ಮತ್ತು ಘನ ಹರಿಸೇವೆ ಎಂದು 2 ವಿಧ. ಹಾಗೆಯೇ ಮಣಿ ಹರಿಸೇವೆ ಮತ್ತು ಪಾನಕ ಹರಿಸೇವೆ ಎಂದು ಇನ್ನು 2 ವಿಧಗಳಿವೆ.

**ಹರಿಸೇವೆ :** ಕುಟುಂಬದ ಹಿರಿಯವ ಅಂದರೆ ಪಟ್ಟೆದಾರ ಉಳಿದ ಸದಸ್ಯದವರನ್ನೂ ಸೇರಿಸಿ ಹರಿಸೇವೆ ಆಚರಿಸುವುದನ್ನು ಪ್ರಸ್ತಾಪಿಸಿ ಒಂದು ಶುಭ ದಿನದಂದು ನೆರವೇರಿಸಲು ತೀರ್ಮಾನ ತೆಗೆದುಕೊಳ್ಳುತ್ತಾರೆ. ಹರಿಸೇವೆಯನ್ನು ಸರ್ವ ಸಾಮಾನ್ಯವಾಗಿ ದಾಸಯ್ಯನವರಿಂದ ಮತ್ತು ಕೆಲವು ಕಡೆ ಬ್ರಾಹ್ಮಣರಿಂದ ಮಾಡಿಸುತ್ತಾರೆ. ಮೊದಲಿಗೆ ದಾಸಯ್ಯನನ್ನು ಭೇಟಿಮಾಡಿ ವೀಳ್ಯನೀಡಿ ಹರಿಸೇವೆಯ ದಿನಾಂಕವನ್ನು ಗೊತ್ತುಪಡಿಸಿ, ಅಗತ್ಯ ಪೂಜಾ ಸಾಮಗ್ರಿಗಳ ಪಟ್ಟಿಯನ್ನು ಪಡೆಯುತ್ತಾರೆ. ಈ ಪೂಜೆಯನ್ನು ಹೆಚ್ಚಾಗಿ ಶನಿವಾರದಂದೇ ಆಚರಿಸುವುದು ವಾಡಿಕೆ. ನಂತರ ಕುಟುಂಬದ ಪಟ್ಟೆದಾರ ಸೂಚಿಸುವ ಯಾವುದೇ ಸದಸ್ಯನನ್ನು 'ಪೂಜಾರಿ' ಎಂದು ಪರಿಗಣಿಸಿ ಆತನನ್ನು ಪೂಜೆ ಏರ್ಪಾಟಿಗೆ ಅಣಿಯಾಗಲು ತಿಳಿಸುತ್ತಾನೆ. ಪೂಜಾರಿಯು ಹರಿಸೇವೆ ಗೊತ್ತುಪಡಿಸಿದ 8 ದಿನಗಳಿಂದ ಮುಂಚಿತವಾಗಿ ಪೂರ್ವಾಹ್ನ ಸ್ನಾನ ಇತ್ಯಾದಿ ಮುಗಿಸಿ, ನೆಲ್ಲಕ್ಕಿ ದೀಪವಿಟ್ಟು ಇತರ ಸದಸ್ಯರೊಡನೆ ದೇವರನ್ನು ಪ್ರಾರ್ಥಿಸಿ ಹರಿಸೇವೆ ಕಾರ್ಯವನ್ನು ಘೋಷಿಸಿ ಮಡಿಯುಟ್ಟು, ಬಾಳೆಗೊನೆ ಹೂ ಸಮೇತ ಕಡಿದು ತಂದು ಶುದ್ಧ ನೀರಿನಿಂದ ತೊಳೆದು ದೂಪ ದೀಪಗಳಿಂದ ಅದನ್ನು ಪೂಜಿಸಿ ಅಟ್ಟದಲ್ಲಿ 'ಮುಡುಪು' ಪಕ್ಕದಲ್ಲಿ ತೂಗು ಹಾಕುತ್ತಾರೆ. ನಂತರ ಹರಿಸೇವೆಯ ದಿನದವರೆಗೂ ಪೂಜಾರಿಯು ಭಕ್ತಿಯಿಂದ ಪ್ರತೀ ನಿತ್ಯ ಬೆಳಿಗ್ಗೆ ಮತ್ತು ಸಂಜೆ ಮುಡುಪು ಮತ್ತು ಬಾಳೆಗೊನೆಗೆ ಧೂಪ ಸಾಂಬ್ರಾಣಿಯಿಂದ ಪೂಜೆ ಸಲ್ಲಿಸುತ್ತಾನೆ. ಈ ಮಧ್ಯೆ ಹರಿಸೇವೆಯ ಆಹ್ವಾನ ಪತ್ರಿಕೆಯನ್ನು ಮುದ್ರಿಸಿ, ಕುಟುಂಬದ ಆಪ್ತ ಬಂಧುಗಳಿಗೆ ಮುಖ್ಯವಾಗಿ ಹೆಣ್ಣು ಕೊಟ್ಟ ಮನೆಯವರು ಹೆಣ್ಣು ತಂದ ಮನೆಯವರು, ಊರಿನವರು ಹಾಗೂ ಇತರ ನೆಂಟರಿಷ್ಟರಿಗೆಲ್ಲಾ ಕಳುಹಿಸಲಾಗುವುದು. ಸದ್ರಿ ಹರಿಸೇವೆ ದಿನದಂದು ದಾಸಯ್ಯ ಸಮಯಕ್ಕೆ ಮುಂಚೆ ಹಾಜರಾಗಿ ಪೂಜೆಗೆ ಸಕಲ ಸಿದ್ಧತೆಗಳನ್ನು ಮಾಡುವರು. ಅಂದಿನ ದಿನದ ಪೂಜೆಗೆ ಕುಟುಂಬ ಮತ್ತು ನೆರೆ ಕರೆಯವರಿಂದ ಸೇರಿದಂತೆ ಐದು ಅಥವಾ ಏಳು ಮಂದಿ ಭಕ್ತ ಮಹಾಶಯರನ್ನು ದಾಸಯ್ಯನವರ ಸಹಾಯಕ್ಕಾಗಿ ನೇಮಿಸಲಾಗುವುದು.

ದಾಸಯ್ಯ ಮತ್ತು ಭಕ್ತಾದಿಗಳು ದೇವರ ಗರ್ಭಗುಡಿ [ಗುಂಡ] ಕಟ್ಟಲು ಬಾಳೆದಿಂಡುಗಳನ್ನು ಕಡಿದು ತಂದು, ಕಾಡಿನಲ್ಲಿ ದೊರೆಯುವ ಒಂದು ಜಾತಿಯ ಮುಳ್ಳು [ಕಾರೆ ಮುಳ್ಳು] ಗಳ ಸಹಾಯದಿಂದ ಅಮೃತ ಶಿಲೆಯಂತೆ ಶೋಭಿಸುವ ಈ ಗುಂಡವನ್ನು ನಿರ್ಮಿಸುತ್ತಾರೆ. ಪೂಜೆಗೆ ಬರುವ ಸರ್ವ ಭಕ್ತ ಜನರು ಹಣ್ಣು ಕಾಯಿ ತಂದು ನೀಡುತ್ತಾರೆ. ಭಕ್ತವೃಂದದವರು ಕರಿ ಮೆಣಸು ಪುಡಿ ಮತ್ತು ಬೆಲ್ಲದಿಂದ ತಯಾರು ಮಾಡಿದ ಪಾನಕ ಮತ್ತು ಅವಲಕ್ಕಿ ಫಲಹಾರಗಳನ್ನು ನೈವೇದ್ಯಕ್ಕಾಗಿ ತಯಾರು ಮಾಡುತ್ತಾರೆ. ಐನ್ ಮನೆಯ ಮುಂಭಾಗದ ಅಂಗಳದಲ್ಲಿ ಪೂಜೆ ಮಾಡುವ ಸ್ಥಳವನ್ನು ಚಪ್ಪರ ತೋರಣಗಳಿಂದಲೂ ಮಡಿವಾಳನ ಮಡಿಬಟ್ಟೆ [ಮೇಲ್ಕಟ್ಟು] ಗಳಿಂದ

ಅಲಂಕರಿಸಿ ಆ ಚಪ್ಪರದ ಕೆಳಗೆ ಗರ್ಭಗುಡಿಯನ್ನು ಇಡುತ್ತಾರೆ. ಇಲ್ಲಿ ಒಂಟಿಗುಡಿ [ಗುಂಡ] ಅಥವಾ ಜೋಡು ಗುಂಡಗಳನ್ನು ತಯಾರು ಮಾಡುತ್ತಾರೆ. ಜೋಡು ಗುಂಡವನ್ನು ಘನ ಹರಿ ಸೇವೆಗೆ ಮಾತ್ರ ಕಡ್ಡಾಯವಾಗಿ ಕಟ್ಟುತ್ತಾರೆ. ಇದಾದನಂತರ ದಾಸಯ್ಯ ಮತ್ತು ಪೂಜಾ ಭಕ್ತರು ಸ್ನಾನಕ್ಕೆ ತೆರಳಲು ಅಣಿಯಾಗುತ್ತಾರೆ. ಸ್ನಾನಕ್ಕೆ ಮುಂಚಿತವಾಗಿ ಅವಲಕ್ಕಿ ಫಲಹಾರ ಸೇವಿಸಿ, ತಲೆಗೆ ಎಣ್ಣೆ ಸ್ವೀಕರಿಸಿ, ವೀಳ್ಯಹಾಕುವ ಪದ್ಧತಿ ಇದೆ. ಸ್ನಾನ ಮಾಡಿ ಬಂದ ನಂತರ ದೇವರ ಹೆಸರಿನಲ್ಲಿ ಬಂದಂತಹ ಹಣ್ಣು ಕಾಯಿಗಳನ್ನು ಒಡೆದು ಗುಂಡದ ಮುಂದೆ ಇಟ್ಟು ಪೂಜೆಗೆ ಸಿದ್ಧತೆಯಾಗುತ್ತದೆ. ನೈವೇದ್ಯಾದಿ ಪಾನಕಗಳನ್ನು ಇಡುತ್ತಾರೆ.

ಈಗ ಒಕ್ಕಲು ಯಜಮಾನ ಯಾ ಪೂಜಾರಿ ದಾಸಯ್ಯ ಭಕ್ತರೊಡಗೂಡಿ ಶಂಖ, ಜಾಗಟೆಯೊಂದಿಗೆ 'ಗೋವಿಂದಾ' ಗೋ...ವಿಂದಾ ಎಂದು ಒಕ್ಕೊರಲಿನಿಂದ ಹೇಳುತ್ತಾ ಅಟ್ಟಕ್ಕೆ ಹೋಗಿ ಅಲ್ಲಿರುವ ಮುಡುಪು ಮತ್ತು ಬಾಳೆ ಗೊನೆಗಳನ್ನು ಬಿಚ್ಚಿ ತಂದು, ಮುಡುಪನ್ನು ಗುಂಡದ ಮುಂದೆಯೂ ಮತ್ತು ಬಾಳೆಗೊನೆಯನ್ನು ಚಪ್ಪರದಲ್ಲಿ ತೂಗು ಹಾಕುತ್ತಾರೆ. ಗುಡಿಯೊಳಗೆ ಶ್ರೀ ವೆಂಕಟರಮಣ ದೇವರ ಪ್ರತಿಮೆಯನ್ನು ಇರಿಸಿರುತ್ತಾರೆ. ಹೀಗೆ ಸರ್ವ ರೀತಿಯ ಪೂಜಾ ಸಿದ್ಧತೆಯಾದ ನಂತರ ದಾಸಯ್ಯನವರು ಪೂಜೆ ಪ್ರಾರಂಭವಾಗುವುದೆಂದು ಘೋಷಿಸುತ್ತಾರೆ. ದಾಸಯ್ಯ ವಿಧಿವತ್ತಾಗಿ ಪೂಜೆ ಮಾಡುತ್ತಿದ್ದಾಗ ಒಡ್ಡೋಲಗವೂ ನಡೆಯುತ್ತಿರುತ್ತದೆ. ಭಕ್ತ ಸ್ತೋಮವು ತಮ್ಮ ಒಕ್ಕೊರಲಿನಿಂದ ಗೋವಿಂದಾ...ಗೋ...ವಿಂದ ಎಂದು ಭಕ್ತಿಯಿಂದ ಜೋರಾಗಿ ಹೇಳುತ್ತಿದ್ದಂತೆ ದೇವರು ಮೊದಲೇ ವೀಳ್ಯಕೊಟ್ಟು ಆಮಂತ್ರಿಸಿಕೊಂಡಿದ್ದಂತ ದರ್ಶನಕಾರನ [ಮೈಮಾನಿಕೆ ಬರುವಾತ] ಶರೀರದಲ್ಲಿ ಬಂದು ಕುಟುಂಬದ ಹಿರಿಯನನ್ನು ಕರೆದು ಆಶೀರ್ವದಿಸುತ್ತಾರೆ. ಕುಟುಂಬದೊಳಗಿನ ನಷ್ಟ ಕಷ್ಟಗಳಿಗೆ ಪರಿಹಾರ ಸೂಚನೆ ನೀಡುವುದಲ್ಲದೆ ಬಂದ ಭಕ್ತ ಸ್ತೋಮದಲ್ಲಿ ಇಚ್ಛಿಸುವವರು ತಮ್ಮ ತಮ್ಮ ಕಷ್ಟ ನಿವಾರಣೆಗಳ ಬಗ್ಗೆ ಸೂಚನೆ ಕೇಳಬಹುದು. ಇದಾದನಂತರ ಮಂಗಳಾರತಿಯೊಂದಿಗೆ ಮಹಾಪೂಜೆ ಮುಕ್ತಾಯಗೊಳ್ಳುತ್ತದೆ ಸಮಸ್ತ ಭಕ್ತರು ತಮ್ಮ ಭಕ್ತಿ ಕಾಣಿಕೆಯನ್ನು ಭಂಡಾರದ ತಟ್ಟೆಗೆ ಹಾಕಿ, ದಾಸಯ್ಯನಿಂದ ನೈವೇದ್ಯ ಪ್ರಸಾರ ಪಾನಕಗಳನ್ನು ಸ್ವೀಕರಿಸುತ್ತಾರೆ.

ಶ್ರೀ ವೆಂಕಟರಮಣ ಸ್ವಾಮಿಗೆ ಪೂಜೆ ಸಲಿಸಿದ ನಂತರ ಆತನ ದ್ವಾರಪಾಲಕರಾದ ಕೆಂಚರಾಯ ಮತ್ತು ಕರಿರಾಯರಿಗೆ ಪೂಜೆ ನೆರವೇರಿಸುತ್ತಾರೆ. ಈಗ ಶ್ರೀ ವೆಂಕಟರಮಣ ದೇವರ ಗುಂಡವನ್ನು ತೆರೆ ಮರೆ ಮಾಡಿ, ಕೆಂಚರಾಯನ ಪ್ರತಿಮೆಗೆ ಪೂಜೆ ಸಲ್ಲಿಸಿ, ಸನಿಹ ದೂರದಲ್ಲಿ, ಕುರಿ ಅಥವಾ ಆಡನ್ನು ಬಲಿ ಕೊಡುವುದಿದೆ. ಕೆಂಚರಾಯ ಮೈಮಾನಿಕೆ ಬರುವಾತನನ್ನು ಆ ಸಂದರ್ಭದಲ್ಲಿ ಕೋಣೆಯೊಳಗೆ ಭದ್ರವಾಗಿ ಕೂಡಿಡುತ್ತಾರೆ. ಬಲಿ ಕೊಡುವ ಜಾಗದಲ್ಲಿ ಚಿಕ್ಕ ಚಪ್ಪರಹಾಕಿ ಬಲಿಕೊಟ್ಟ ನಂತರ 'ಕೆಂಚರಾಯ ದರ್ಶನಕಾರ' ನನ್ನು ಭದ್ರಕೋಣೆಯಿಂದ ಬಿಡುತ್ತಾರೆ. ಉಗ್ರಾವತಾರದಿಂದ ಈ ದರ್ಶನಕಾರನು ಬಲಿಯನ್ನು ಭಕ್ಷಿಸಲು ಮುನ್ನುಗ್ಗುತ್ತಾನೆ. ಆದರೆ ಭಕ್ತರು ಇವನನ್ನು ತಡೆದು ನಿಲ್ಲಿಸುತ್ತಾರೆ. ಇದಕ್ಕೆ 'ಬೇಟೆ ಬೀಳುವುದೆಂದು ಹೇಳುತ್ತಾರೆ. ಆ ನಂತರ ಬಲಿ ನೀಡಿದ ಪ್ರಾಣಿಯನ್ನು ಸ್ವಚ್ಛಗೊಳಿಸಿ ಅದರ ಮಾಂಸದಿಂದ ಮಾಡಿದ ಅಡುಗೆಯನ್ನು ರೊಟ್ಟಿಯೊಂದಿಗೆ ಧೂತರಿಗೆ ಎಡೆ ಹಾಕುತ್ತಾರೆ. ಇಲ್ಲಿ ಪೂಜೆ ಮುಗಿಸಿದ ನಂತರ ನೆರೆದ ಸರ್ವ ಭಕ್ತಸ್ತೋಮಕ್ಕೆ ಊಟೋಪಚಾರ ನಡೆಯುತ್ತದೆ. ಊಟಕ್ಕೆ ಮುಂಚೆ ಭಕ್ತಾದಿಗಳು ತಮ್ಮ ಹಣ್ಣು ಕಾಯಿಗಳನ್ನು ಸ್ವೀಕರಿಸುತ್ತಿದ್ದಂತೆ ದೇವರ ಗುಂಡವನ್ನು ಭಕ್ತರು ಹೆಗಲ ಮೇಲೆ ಹೊತ್ತುಕೊಂಡು ಸ್ವಾಮಿಗೆ ಜಯಕಾರ ಹಾಕುತ್ತಾ ಅನತಿ ದೂರದಲ್ಲಿ ಯಾವುದಾದರೂ ಹಾಲು ಬರುವ ಮರದ ಬುಡದಲ್ಲಿ ಇಟ್ಟು ವಾಪಸ್ಸಾಗುತ್ತಾರೆ. ಭಂಡಾರಕ್ಕೆ ಬಿದ್ದ ಹಣವನ್ನು ಎಣಿಕೆಮಾಡಿ ಮುಡುಪನ್ನು ಅಟ್ಟಕ್ಕೆ ಏರಿಸುತ್ತಾರೆ. ಈ ಹಣವನ್ನು ತಿರುಪತಿಗೆ ತಲುಪಿಸುವುದು.

ಘನ ಹರಿಸೇವೆ ಕುಟುಂಬದಲ್ಲಿ ಯಾವುದಾದರು ಕಷ್ಟ ನಷ್ಟ ತಲೆದೋರಿದಾಗ ಘನ ಹರಿಸೇವೆ ನಡೆಸುತ್ತೇನೆಂದು ಪ್ರಾರ್ಥಿಸಿಕೊಳ್ಳುತ್ತಾರೆ. ಇದು ಬಹಳ ಶ್ರೇಷ್ಠಕರವಾದದ್ದು. ಹರಿಸೇವೆಯು ಭಕ್ತಿ ಪೂಜೆಯಿಂದ ನಿಧಿಪಡಿಸಿದ ಕಾಲದಲ್ಲಿ ನೆರವೇರುವಂತಹದು. ಹರಕೆ ಹೊತ್ತು ಮಾಡುವ ಈ ಘನ ಹರಿಸೇವೆಯನ್ನು ಕೇವಲ ಕೆಲವೊಂದು ಕುಟುಂಬಗಳು ಮಾತ್ರ ಮಾಡುವ ಪದ್ಧತಿಯಾಗಿದೆ. ಇದರ ವಿಶೇಷತೆ ಎಂದರೆ ಜೋಡು ಗುಂಡ ಕಡ್ಡಾಯವಾಗಿ ಇರಲೇಬೇಕು. ಒಂದು ಗುಂಡದಲ್ಲಿ ಶ್ರೀ ವೆಂಕಟರಮಣ ದೇವರ ಪ್ರತಿಮೆಯನ್ನು ಇನ್ನೊಂದರಲ್ಲಿ ಕೆಂಚರಾಯನ ಪ್ರತಿಮೆಯನ್ನಿಟ್ಟು ಮಾಮೂಲು ಪೂಜೆಯಂತೆ ಹಿಂದೆ ತಿಳಿಸಿದಂತೆ ಮಹಾ ಪೂಜೆ ನೆರವೇರುತ್ತದೆ. ಮಹಾ ಪೂಜೆಯವರೆಗೆ ಪೂಜಾ ಕ್ರಮ ಒಂದೇ ತರವಿದ್ದು, ಶ್ರೀ ವೆಂಕಟರಮಣ ವಿಗ್ರಹವಿರುವ ಗುಂಡವನ್ನು ತೆರೆಮರೆ ಮಾಡಿ, ಕೆಂಚರಾಯನ ವಿಗ್ರಹವನ್ನು ಹೊರತೆಗೆದು, ದಾಸಯ್ಯನವರು ಭಕ್ತವೃಂದದೊಂದಿಗೆ ಸನಿಹದಲ್ಲಿನ ನದಿ ಯಾ ಕೆರೆಗೆ ಜಲಕಕ್ಕೆ ಹೊರಡುತ್ತಾರೆ. ಕೆಂಚರಾಯನ ವಿಗ್ರಹವನ್ನು ಭಕ್ತಾದಿಗಳ

[8ನೇ ಪುಟ ನೋಡಿ]

# ಗೌಡರ ವಿವಾಹ ಪದ್ಧತಿಯ ಸೋಭಾನೆಗಳು

[ಹಿಂದಿನ ಸಂಚಿಕೆಯಿಂದ]

**12. ಹಾಲು ತುಪ್ಪ ಕುಡಿಸುವಾಗ ಹೇಳುವ ಸೋಬಾನೆ:**

ಬಟ್ಟಾಲು ತೊಳೆದಿರಿಸು ಪಟ್ಟೆಯು ನೆರಿಯುವಳೆ ಸಣ್ಣ ಮುತ್ತೀನ ಕೊರಳವಳೆ। ಸಣ್ಣ ಮುತ್ತಿನ ಕೊರಳವಳೆ ತಾರಮ್ಮ ಬಟ್ಟಾಲು ತೊಳೆದು ಎಡೆಮಾಡಿ॥ ಕಿನ್ನಾಲು ತೊಳೆದಿರಿಸಿ ಮುತ್ತಿನ ನೆರಿಯುವಳೆ ಸಣ್ಣ ಮುತ್ತಿನ ಕೊರಳವಳೆ। ತಾರಮ್ಮ। ಕಿನ್ನಾಲು ತೊಳೆದು ಎಡೆಮಾಡಿ। ಕಾಳಿಯು ಕರೆದ್ದಾಲು ಕೆಂದೆಯು ಕರೆದ್ದಾಲು ಕೆಂದೆಯು ಕರೆದ ನೊರೆ ಹಾಲು ಸಕ್ಕರೆ। ಸಾಮಿಗೆ ಅರ್ಪಿಸಿದ್ವ ನವಧಾನ್ಯ॥ ಕೆಂದೆಯು ಕರೆದ್ದಾಲು। ಕೆಂಪಿಯು ಕರೆದ ನೊರೆಹಾಲು ಸಕ್ಕರೆ॥ ದೇವರಿಗೆ ಅರ್ಪಿಸಿದ ನವಧಾನ್ಯ॥ ಅಕ್ಕರ ದಿನದಲ್ಲು ಸುಕ್ರ ಮುತ್ತಿನಾರತಿಯು। ಅಕ್ಕರದಾರತಿಯು ಬೆಳಗಿರೆ॥ ಸಕ್ರವು ದಿನದಲ್ಲು ಸುಕ್ರಮುತ್ತಿನಾರತಿ। ಶ್ರೀ ಮಂದಾರತಿಯು ಬೆಳಗಿರೆ॥ ನೂರಲೆಯು ಎಲೆ ತಂದು ಬೊಗ್ಗಿಸಿ ದೊನ್ನೆಯು ಕಟ್ಟೆ ನುಗ್ಗಮ್ಮನಂತೆ ಮಡದಿಯರು। ನುಗ್ಗಮ್ಮನಂತೆ ಮಡದಿಯರು ಕನ್ಯೆಗೆ ಹಾಲು ತುಪ್ಪ ಎಡೆಮಾಡಿ। ಬಾಳೆಯು ಎಲೆ ತಂದು ಬೊಗ್ಗಿಸಿ ದೊನ್ನೆಯು ಕಟ್ಟೆ ನುಗ್ಗಮ್ಮನಂತೆ ಮಡದಿಯರು। ನುಗ್ಗಮ್ಮನಂತೆ ಮಡದಿಯರು ನಿಸ್ತ್ರೀಗೆ ಹಾಲು ತುಪ್ಪ ಯೆಡೆಮಾಡಿ॥

**13. ಅ) ಬಾಗಿಲು ತಡೆಯುವ ಹಾಡು :**

ರಂಗಿನ ಪರಿಣಯ ಐದನೆ ದಿವಸದಿ ಮಂಗಳೋಕುಳಿಯ ನಾಡಿ ಭೂಸುರರಂತ ರಂಗದಿಷ್ಟವ ನೀಡಿ। ವಿನೋದದೊಳಂಗನೆ ಯೊಡಗೂಡಿ ಬರುತಿರಲು। ನೋಡಿ ಅಂಗಜನ ಮದದಾನೆ ಯಂದದಿ। ಅಂಗನೆಯರ ಸಮ್ಮೇಳದಿಂದಲಿ ಅಂಗನಾಮಣಿ ರುಕ್ಮಿ ರೂಪಿಣಿ ರಂಗನಾಥನ ತಡೆದು ದ್ವಾರದಿ ತಂಗಿ ಸೌಭದ್ರೆ ನುಡಿದಾಳು ॥ಸೋಬಾನೆ॥ ೧ ॥ ವಲ್ಲಭೆಯನು ಕರಕೊಂಡು ವಿನೋದದಿ ಎಲ್ಲಿಗೆ ಗಮನವಿದು ಅಣ್ಣಯ್ಯ ಕೇಳ್ ನಿಲ್ಲೊಂದು ಮಾತುಂಟನ್ನು ಈ ಲೋಕಕ್ಕೊಡೆಯ ಲಕ್ಷ್ಮಿವಲ್ಲಭನೆ। ನೀನೊಲಿದು ಕಡುಕೃಪೆಯಲ್ಲಿ ಯನಗಿಷ್ಟವನು ಈ ಕ್ಷಣದಲಿ ಪಾಲಿಪುವನಕ ಕದಬಿಡ ದಯ ಮಾಡಣ್ಣಯ್ಯ ಶ್ರೀ ಕೃಷ್ಣಯ್ಯಾ ॥ ೨ ॥ ಆ ಕಮಲಾಕ್ಷಿಯರುಗಳೆ ಸಮ್ಮೇಳದಿರಾಕಂದು ಮುಖಿಯೇ ನೀನು। ದ್ವಾರದೊಳೆನ್ನ ಯಾಕವ್ವ ತಡೆದೆ ನೀ ಬೇಕಾದ ಬಯಕೆಯನು ನೀ ಪೇಳಿದುದನು ಲೋಕ ವೀರೇಳರೊಳಗೆ ಇದ್ದರು ನಾ ತರಿಸಿ ಕೊಡಿಸುವೆನು ಈ ಕ್ಷಣ। ಕೋಕಿಲಾ ಸ್ವರೆ ಕಂಬುಕಂದರೆ ಪಾಕ ಶಾಸನ ಸುತನ ಪ್ರಿಯಳೇ॥ ಕದಬಿಡೆ ತಂಗಿ ಮೋಹನಾಂಗಿ ॥ ೩ ॥ ಲೋಕ ನಾಯಕನೇ ನಿನ್ನ ದರದಿ ಜನಿಸಿದ ಲೋಕಯಿರೇಳರಲಿ। ನೀನರಿಯದ ಲೋಕ ಪ್ರಪಂಚದಲಿ ಯಾವುದು ಸಾಕು ಸಾಕೆನ್ನೊಳೀ ಮಾತ ತಿಳಿದವನು ನೀನು। ಲೋಕಬಾಧಕರಾದ ದುರುಳ ರಕ್ಕಸರನು ಸಂಹರಿಸಿ ಲಗ್ನದಿ ಆಕರಿಸಿ ಬರುವಾಗ ತಡೆದ ವಿವೇಕ ಮನದೊಳಗರಿತು ಈ ಕ್ಷಣ ದಯಮಾಡಣ್ಣಯ್ಯ ಶ್ರೀ ಕೃಷ್ಣಯ್ಯಾ ॥ ೪ ॥ ಪನ್ನ ‾ ವೇಣಿ ಕಾಲಂದುಗೆ ಕಿರುಗೆಜ್ಜೆ ಹೊನ್ನ ಕಾಲುಂಗುರವನು। ಸಣ್ಣ ನಡುವಿನ ಹೊನ್ನಿನೊಡ್ಯಾಣವನು ಜೋಡಾಗಿಹ ರನ್ನದ ನೇವಳವನು। ಸರಪಣಿಯನು ಚಿನ್ನದುಂಗುರ ದೋರೆ ಚಳಕಿ ಸುವರ್ಣ ಕಡಗವು ವಂಕಿ ಹಿಂಬಳೆಯನ್ನು ನಾನಿನಗೀಗ ಕೊಡುವೆನು। ಸುಗಣೆ ಕೇಳೆಲೆ ತಡೆಯ ದೀಕ್ಷಣ ಕದಬಿಡೆ ತಂಗಿ ಮೊಹನಾಂಗಿ ॥ ೫ ॥ ಪನ್ನಗಶಯನ ಕಾಲಂದುಗೆ ಕಿರುಗಜ್ಜೆ ಹೊನ್ನ ಕಾಲುಂಗುರವನು। ಸ ಣ್ಣ ನಡುವಿನ ಹೊನ್ನಿನೊಡ್ಯಾಣವನು। ಜೋಡಾಗಿಹ ರನ್ನದ ನೇವಳವನು। ಸರಪಣಿಯನು ಚಿನ್ನದುಂಗರ ದೋರ ಚಳಿಕೆ ಸುವರ್ಣ ಕಡಗವು ವಂಕಿ ಹಿಂಬಳೆಯನು ಎನಗೆನ್ನವ್ವ ಕೊಡುವಳು ಹರುಷದಿಂದಲಿ ಮನ್ಮನೋರಥದಯಾ ಮಾಡಣ್ಣಯ್ಯ ಶ್ರೀ ಕೃಷ್ಣಯ್ಯಾ ॥ ೬ ॥ ಚಿತ್ತದಿ ಅರಗಿಣಿ ನೀ ಕೇಳು ಕಠ್ಯಾಣೆ ಮುತ್ತಿನ ಸರಗಳನೂ। ಶೋಭಿಪನವರತ್ನದ ಮಾಲೆಯನು ಮೇಲೊಪ್ಪುವ ಕೆತ್ತಿಗೆಯ ಪದಕವನು। ಏಕಾವಳಿಯನು॥ ಪುತ್ಥಳೀ ಸರಮಾಲೆ ಸರಪಣಿ ಕೆತ್ತಿಗೆಯ ಮೂಗುತಿಯು ಸರಸಿಜನೇತ್ರೆ ನಾ। ನಿನಗೀಗ ಕೊಡುವೆನು ತರುಣಿರನ್ನಳೆ ಕೀರಭಾಷಿಣಿ॥ ಕರಬಿಡೆ ತಂಗಿ ಮೋಹನಾಂಗಿ ॥ ೬ ॥ ಚಿತ್ತ ಜನಕನೇ ನೀ ಕೇಳು ಕಠ್ಯಾಣೆ ಮುತ್ತಿನ ಸರಗಳನು। ಶೋಭಿಪ ನವರತ್ನದ ಮಾಲೆಯನ್ನು। ಮೇಲೊಪ್ಪುವ ಕೆತ್ತಿಗೆ ಪದಕವನು ಏಕಾವಳಿಯನು ಪುತ್ಥಳೀ ಸರಮಾಲೆ ಕೆತ್ತಿಗೆಯ ಮೂಗುತಿಯು ರಸಸಿನೇತ್ರಯನಗೆನ್ನಪ್ಪ ಕೊಡುವರು। ಹರುಷದಿಂದಲಿ ಮನ್ಮನೋರಥ ದಯಮಾಡಣ್ಣಯ್ಯಾ ಶ್ರೀ ಕೃಷ್ಣಯ್ಯ ॥ ೮ ॥ ಸರಸಿ ಜಾನಕಿ ಕೇಳು ಕರು ಎಮ್ಮೆ ಗೋವ್ಗಳು ತುರುಗಾವಲರುಗಳು। ನಾವಾಳುವ ಸರಿಯರ್ಧ ಧರಣಿಯೊಳು ನೂತನವಾದವರ ಪೀತವಸನಂಗಳು ಹಯವಾರಣಂಗಳು॥ ಮರೆವ ದಾಸಿಯರುಗಳ ಗಡಣದಿ ಪರಮ ದ್ರವ್ಯಗಳೆಂಟು ಕಿವಿಕೊಪ್ಪುರಿಗೆ ಸಾವಿರವೀಗ ಕೊಡುವೆನು। ತರುಣಿ ರನ್ನಳೆ ಕೀರಭಾಷಿಣಿ ಕದಬಿಡೆ। ತಂಗೀ ಮೋಹನಾಂಗಿ ॥ 9 ॥ ಸರಸಿ ಜಾಂಬಕ ಕೇಳುಕರು ಎಮ್ಮೆ ಗೋವ್ಗಳು ತುರುಗಾವಲರುಗಳೂ। ನೀನಾಳುವ ಸರಿಯರ್ಧ ಧರಣಿಯೊಳು ನೂತನವಾದ ವಸನಂಗಳು।

[ಈ ಸೋಬಾನೆ ಹಾಡು ಮುಂದುವರೆಯುತ್ತದೆ]

ಪೈಕಿ ಹಿಂದೆ ತಿರುಪತಿ ಯಾತ್ರೆ ಕೈಗೊಂಡವನು ತನ್ನ ಹೆಗಲ ಮೇಲೆ ಹೊತ್ತುಕೊಂಡಿರುತ್ತಾನೆ. ಸ್ನಾನಾದಿ ಮುಗಿಸಿ ಅಲ್ಲಿ ವಿವಿಧ ಪೂಜಾ ಸಾಮಗ್ರಿಗಳಿಂದ ಬಾಳೆ ಎಲೆಯಲ್ಲಿ ಎಡೆಹಾಕಿ ಪ್ರಾರ್ಥನೆ ಮುಗಿಸಿಕೊಂಡಾಗ ದರ್ಶನಕಾರನಿಗೆ ವಿಶೇಷವಾಗಿ ದರ್ಶನ ಬರುತ್ತದೆ. ದರ್ಶನ ಬರುವ ಸ್ಥಳದಲ್ಲಿ ವೃತ್ತಾಕಾರವಾಗಿ ಮಂಡಲ ಬರೆದು, [ಇದು ಲಕ್ಷ್ಮಣ ರೇಖೆ ತರಹ] ದಾಸಯ್ಯನು ಅದರ ಮಧ್ಯದಲ್ಲಿ ಮಡಿ ಬಟ್ಟೆಯಲ್ಲಿ ಭತ್ತದ ಹುದುರಿಯ ರಾಶಿ ಹಾಕಿ ಮಂತ್ರಪಟನ ಮಾಡುವಾಗ ಉಗ್ರ [ನರಸಿಂಹವತಾರ] ತಳೆದು ಕೆಂಚರಾಯ [ವೈಮಾನಿಕೆ ಬರುವಾತನು] ಭಕ್ಷಿಸಲು ಬೀಳುತ್ತಾನೆ. ಹೀಗೆ ಮನೆಗೆ ವಾಪಾಸಾಗುವ ತನಕ 2–3 ಕಡೆ ಈ ರೀತಿ ಬಲಿ ಬೀಳುವುದಿದೆ. ದಾರಿಯುದ್ದಕ್ಕೂ ಎರಡು ಕಡೆ ಜನಸ್ತೋಮ ಸಾಲುಕಟ್ಟಿ ಬರುತ್ತಿರುತ್ತಾನೆ. ಒಡ್ಡೋಲಗದೊಂದಿಗೆ ಕಳಸ ಕನ್ನಡಿ ಹಿಡಿದ ಇಬ್ಬರು ಬಾಲಕಿಯರು ಮುಂದೆ ಸಾಗುತ್ತಿರುತ್ತಾರೆ. ಮಡಿವಾಳನು ತನ್ನ ಎರಡು ಕೈಗಳಲ್ಲಿ ಬೆಳಕಿನ ಪಂಜುಗಳನ್ನು ಹಿಡಿದಿರುತ್ತಾನೆ. ಕಾರಣ ಘನ ಹರಿಸೇವೆಯನ್ನು ರಾತ್ರಿಯಲ್ಲೇ ಮಾಡುವ ಕ್ರಮವಾಗಿದೆ. ದರ್ಶನಕಾರನು ಆರ್ಭಟಿಸುತ್ತಾ ಬೆಳಕಿನ ಪಂಜುಗಳನ್ನು, ಬಲಿಯನ್ನು [ಭತ್ತದ ಹೊದ್ರಿ ಮತ್ತು ಬಾಳೆ ಹಣ್ಣು] ಭಕ್ಷಿಸಲು ಮೇಲೆ ಎರಗುತ್ತಿರುವ ದೃಶ್ಯ ಮತ್ತು ಆತನು ತನ್ನ ಎರಡು ಕೈಗಳಲ್ಲಿ ಸೊಪ್ಪಿನ ಕೊಂಬೆಗಳನ್ನು ಹಿಡಿದು ಆರ್ಭಟಿಸುತ್ತಾ ಓಡುವುದು ತುಂಬಾ ರಮಣೀಯವಾಗಿರುತ್ತದೆ. ಹೀಗೆ ಐನ್ ಮನೆಯ ಅಂಗಳಕ್ಕೆ ಬಂದು ಸೆರುತ್ತಾರೆ. ಅನಂತರ ಇಲ್ಲಿಯೂ ಕೆಂಚರಾಯನಿಗೆ ಕುರಿ ಅಥವಾ ಆಡು ಬೇಟೆ ಬೇಡುವುದಿದೆ. ಇಲ್ಲಿಗೆ ಈ ಕಾರ್ಯಕ್ರಮವು ಮುಗಿಯುತ್ತದೆ.

**ಮಣೆ ಹರಿಸೇವೆ :** ಮಣೆ ಹರಿಸೇವೆಯಲ್ಲಿ ಗುಂಡವಿರುವುದಿಲ್ಲ. ಬೇಟೆ ಬೀಳುವ ಕ್ರಮ ನಿಷಿದ್ಧ. ವೆಂಕಟರಮಣ ದೇವರ ವಿಗ್ರಹವನ್ನು ಮಣೆ ಮೇಲೆ ಬಾಳೆಎಲೆ ಇಟ್ಟು ಅಕ್ಕಿಯಲ್ಲಿ ಕುಳ್ಳಿರಿಸಿ ಪೂಜಿಸುವ ಕ್ರಮದ ಪೂಜೆ.

**ಪಾನಕ ಹರಿಸೇವೆ :** ಇದರಲ್ಲಿಯೂ ದೇವರ ವಿಗ್ರಹವನ್ನು ಸೂಕ್ತ ಆಸನದಲ್ಲಿರಿಸಿ, ಬೆಲ್ಲ ಮತ್ತು ಕರಿಮೆಣಸಿನ ಪುಡಿಯಿಂದ ತಯಾರಿಸಿದ ಪಾನಕವಿಟ್ಟು ಲಘು ರೀತಿಯಲ್ಲಿ ನಡೆಯಿಸುವ ಪೂಜಾಕ್ರಮಗಳು ಈಗ ರೂಢಿಯಲ್ಲಿಲ್ಲವೆಂದು ಹೇಳಬಹುದು.

## ಕೊಡಗು ಸಂಗಾತಿಯ ಜೀವನದಿ

1 ವರ್ಷವಿಡೀ ಸಂತೋಷವಾಗಿ
12 ತಿಂಗಳು ಹರುಷವಾಗಿ
52 ವಾರಗಳು ಸುಖಮಯವಾಗಿ
365 ದಿನಗಳು ಅನುಕೂಲಕರವಾಗಿ
8760 ಗಂಟೆಗಳೂ ನಲಿಯುತ ಸಾಗಿ
525600 ನಿಮಿಷಗಳಲ್ಲೂ ನಿನ್ನ ಜೀವನ ಪ್ರತಿ
ಸೆಕೆಂಡುಗಳಲ್ಲೂ ಸುಖಮಯವಾಗಿರಲೆಂದು

ಹಾರೈಸುವ

● **ನಡುಮನೆ ರಶಿ ಚಂಗಪ್ಪ,**
ಮೈಸೂರು.

## ಆ ಸೆ

ಹಕ್ಕಿಗೆ ಗೂಡಿನಾಸೆ
ಕರುವಿಗೆ ಹಸುವಿನಾಸೆ
ಮಗುವಿಗೆ ತಾಯಿಯಾಸೆ
ಆದರೆ ನನಗೆ ಯಾವಾಗಲೂ
ಕೊಡಗು ಸಂಗಾತಿಯಾಸೆ.

● **ಮಣ್ಣಾಂಣ್ಣನ ಲಲಿತ ಎಲ್.**
ಮಡಿಕೇರಿ.

## ಮೂರರ ಮಹತ್ವ

ಈ ಮೂವರನ್ನು ಸದಾ ಆದರದಿಂದ ಕಾಣಬೇಕು
ತಂದೆ, ತಾಯಿ, ಗುರು.

ಈ ಮೂವರನ್ನು ಚೇಷ್ಟೆ ಮಾಡಬಾರದು
ಮುದುಕ, ಹುಚ್ಚ, ಮೂರ್ಖ.

ಈ ಮೂರನ್ನು ನಿಯಮದಿಂದ ಪಾಲಿಸಬೇಕು
ಪ್ರಾರ್ಥನೆ, ಊಟ, ವ್ಯಾಯಾಮ.

ಈ ಮೂರಕ್ಕೆ ಸದಾ ಹೆದರುತ್ತಿರಬೇಕು
ಸುಳ್ಳು, ನಿದ್ದೆ, ಕಳ್ಳತನ.

ಈ ಮೂರರಿಂದ ಸದಾ ದೂರವಿರಬೇಕು
ಕುಡಿತ, ಜೂಜು, ಧೂಮಪಾನ.

ಈ ಮೂವರನ್ನು ನಂಬಬಾರದು
ಕಳ್ಳನನ್ನು, ದುಷ್ಟನನ್ನು, ಬೆಂಕಿಯನ್ನು.

● **ಕಾನೆಹಿತ್ಲು ನಂಜಪ್ಪ,**
ಕುಶಾಲನಗರ.

## ನುಡಿ ಮುತ್ತು

ಯಾರು ಶಸ್ತ್ರಗಳಿಗೆ ಅಧಿಕಾರಿಗಳೋ, ಅವರೇ ಮಂತ್ರಾಲೋಚನೆಗೂ ಅಧಿಕಾರಿಗಳಾಗಿರಬಾರದು. —ನೀತಿಸೂತ್ರ.

# ಮರಗೋಡುವಿನಲ್ಲಿ ವಿಜೃಂಭಿಸಿದ 2ನೇ ವರ್ಷದ ಕೈಲ್ ಮುಹೂರ್ತ ಆಚರಣೆ

ಮರಗೋಡು ಗೌಡ ಸಮಾಜದ ಆಶ್ರಯದಲ್ಲಿ 2ನೇ ವರ್ಷದ ನಾಡಹಬ್ಬ ಕೈಲ್ ಮುಹೂರ್ತವನ್ನು ದಿನಾಂಕ 18–10–1998ನೇ ಭಾನುವಾರ ವಿಜೃಂಭಣೆಯಿಂದ ಆಚರಿಸಲಾಯಿತು. ಪ್ರಾರಂಭದಲ್ಲಿ ಕು|| ಬಡುವಂಡ ಪ್ರಮೋದಿನಿ ಸಹೋದರಿಯರಿಂದ ಪ್ರಾರ್ಥನೆ. ಸಮಾರಂಭದಲ್ಲಿ ಕರ್ನಾಟಕ ಸರ್ಕಾರದ ಮಾಜಿ ಸಚಿವರಾದ ಶ್ರೀ ದಂಬೆಕೋಡಿ ಚಿಣ್ಣಪ್ಪನವರು ಕುಲಗುರು ಶ್ರೀ ವೆಂಕಟರಮಣನಿಗೆ ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸಿದರು. ಸಭೆಯ ಅಧ್ಯಕ್ಷತೆಯನ್ನು ಸಮಾಜದ ಅಧ್ಯಕ್ಷರಾದ ಶ್ರೀ ಜೈಮನ ಪೊನ್ನಪ್ಪನವರು ವಹಿಸಿದ್ದರು. ತಮ್ಮ ಉದ್ಘಾಟನ ಭಾಷಣದಲ್ಲಿ ಶ್ರೀ ಚಿಣ್ಣಪ್ಪನವರು

ಜೈನೀರ ವೆಂಕಟೇಶ್,
ಗೌ|| ಕಾರ್ಯದರ್ಶಿ, ಗೌಡ ಸಮಾಜ, ಮರಗೋಡು.

ಮಾತನಾಡಿ ಈ ವಲಯದ ಗೌಡ ಜನಾಂಗವು ಒಂದಾಗಿ ತನ್ನ ಒಗ್ಗಟ್ಟನ್ನು ತೋರಿಸಿಕೊಟ್ಟಿದೆ ಎಂದು ವಿಶ್ಲೇಷಿಸಿದರಲ್ಲದೆ, ಕಾರ್ಯಕ್ರಮವನ್ನು ಶ್ಲಾಘಿಸಿ ಇನ್ನು ಮುಂದೆಯೂ ಇಂತಹ ಕಾರ್ಯಕ್ರಮಗಳು ನಡೆದು ಬರಲಿ ಎಂದು ಹಾರೈಸಿದರು.

ಮುಖ್ಯ ಅತಿಥಿಗಳಾದ ಮಡಿಕೇರಿ ಕ್ಷೇತ್ರದ ಶಾಸಕ ಶ್ರೀ ದಂಬೆಕೋಡಿ ಮಾದಪ್ಪನವರು ಮಾತನಾಡಿ ಕೊಡಗಿನ ಗೌಡ ಸಮಾಜಗಳಲ್ಲಿ ಪ್ರಥಮವಾಗಿ ಕೈಲ್ ಮುಹೂರ್ತವನ್ನು ಅದ್ದೂರಿಯಾಗಿ ನಡೆಸಿದ ಕೀರ್ತಿಯು ಮರಗೋಡು ಗೌಡ ಸಮಾಜಕ್ಕೆ ಸಲ್ಲುತ್ತದೆ ಎಂದರು.

ಇನ್ನೊಬ್ಬ ಅತಿಥಿ ಮಡಿಕೇರಿ ತಾಲೋಕು ಪಂಚಾಯಿತ್ತಿ ಅಧ್ಯಕ್ಷರಾದ ಶ್ರೀ ದೊಡ್ಡಡ್ಕ ಬಾಲಕೃಷ್ಣನವರು ಮಾತನಾಡಿ 'ಹತ್ತು ಕುಟುಂಬ ಹದಿನೆಂಟು ಗೋತ್ರ' ಎಂಬ ಗೌಡ ಜನಾಂಗದ ನುಡಿಯಂತೆ ಇಂತಹ ಕಾರ್ಯವನ್ನು ನಮ್ಮ ಹಿರಿಯರು ಬಹಳ ಹಿಂದಿನಿಂದಲೂ ಹಮ್ಮಿಕೊಂಡಿದ್ದರು. ಆರ್ಥಿಕ, ಸಾಮಾಜಿಕ, ಶೈಕ್ಷಣಿಕವಾಗಿ ಅಭಿವೃದ್ಧಿ ಸಾಧಿಸಲು ಸರ್ವರೂ ಪ್ರಯತ್ನಿಸಬೇಕೆಂದು ಕರೆನೀಡಿದರು. ಅತಿಥಿ ಸ್ಥಾನದಿಂದ ಮಾತನಾಡಿದ ಜಿಲ್ಲಾ ಪಂಚಾಯಿತ್ತಿ ಉಪಾಧ್ಯಕ್ಷರಾದ ಶ್ರೀಮತಿ ಅಮೆಮನೆ ಕಮಲ ಗಣಪತಿಯವರು ಮಾತನಾಡಿ, ಗೌಡ ಜನಾಂಗದ ಇಂತಹ ಸಂಘಟನೆಗಳು ಪದೇ ಪದೇ ನಡೆಯುವಂತಾಗಬೇಕೆಂದು ಕರೆ ನೀಡಿದರು.

ಮುಖ್ಯ ಅತಿಥಿಗಳಲ್ಲಿ ಒಬ್ಬರಾದ ಮೈಸೂರು ಯುವರಾಜ ಕಾಲೇಜಿನ ಕಾನಡ್ಕ ಪದ್ಮಾಜಿಯವರು ರಾಜಕೀಯದಲ್ಲಿ ಬೆಳೆದವರನ್ನು ಸಭೆ ಸಮಾರಂಭಗಳಿಗೆ ಆಹ್ವಾನಿಸುವ ಕ್ರಮವಿರುವಾಗ ಶಿಕ್ಷಕನಾದ ತನ್ನನ್ನು ಆಹ್ವಾನಿಸಿರುವುದು ಆಶ್ಚರ್ಯ ಮೂಡಿಸಿದೆ ಎಂದರು. ಗೌಡ ಸಂಸ್ಕೃತಿಯನ್ನು ಹಾಗೂ ಅರೆಭಾಷೆಯನ್ನು ಉಳಿಸಿ–ಬೆಳೆಸಿ ಪೋಷಿಸಿಕೊಂಡು ಹೋಗಲು ಗೌಡ ಯುವಜನಾಂಗವು ಹೆಚ್ಚಿನ ಶ್ರಮವಹಿಸುತ್ತಿರುವುದು ಸಂತೋಷದ ಸಂಗತಿಯೆಂದರು.

ಕೊಡಗು ಗೌಡ ಸಾಂಸ್ಕೃತಿಕ ಅಕಾಡಮಿಯ ಅಧ್ಯಕ್ಷರಾದ ಶ್ರೀ ತುಂತ್ರಜೆ ಗಣೇಶ್‌ರವರು ಮಾತನಾಡಿ ಜಿಲ್ಲೆಯ ಎಲ್ಲಾ ಗೌಡ ಸಮಾಜಗಳು ಒಂದುಗೂಡಿ ಜಿಲ್ಲಾ ಮಟ್ಟದ **"ಗೌಡ ಸಮಾಜ ಒಕ್ಕೂಟ"** ಸ್ಥಾಪನೆಯಾಗಬೇಕು ಎಂದು ಸಭೆಗೆ ವಿವರಿಸಿದರು.

ಸಮಾರಂಭದಲ್ಲಿ ಗೌಡ ಸಮಾಜಕ್ಕೆ ಉದಾರವಾಗಿ ಸ್ಥಳ ದಾನ ಮಾಡಿದ ಶ್ರೀ ಉಳುವಾರನ ಸುಬ್ಬಯ್ಯನವರನ್ನು ಸನ್ಮಾನಿಸಲಾಯಿತು. ಜಿಲ್ಲಾ ಮಟ್ಟದ ಪ್ರಶಸ್ತಿ ವಿಜೇತ ಶಿಕ್ಷಕಿಯರಾದ ಸ್ಥಳೀಯ ಶ್ರೀಮತಿ ಅಯ್ಯಂಡ್ರ ಪಾರ್ವತಿ ಪೂಣಚ್ಚ ಹಾಗೂ ಶ್ರೀಮತಿ ಪರಿಚನ ಪೂವಮ್ಮ ಮುತ್ತಪ್ಪ ಮತ್ತು ನೆಹರು ಯುವ ಕೇಂದ್ರದ ವತಿಯಿಂದ ಜಿಲ್ಲಾ ಮಟ್ಟದ ಯುವ ಪ್ರಶಸ್ತಿ ವಿಜೇತರಾದ ಸ್ಥಳೀಯರಾದ ಶ್ರೀ ಕೊಂಪುಳೀರ ಗಣೇಶ್ ಬೋಪಯ್ಯ, ಮಾಳಿಗೆ ಮನೆ ಶ್ರೀ ವೆಂಕಟೇಶ್ ಮತ್ತು ಶ್ರೀ ಬೊಳ್ಳೂರು ಸನತ್‌ಕುಮಾರ್ ಇವರುಗಳನ್ನು ಶಾಲು ಹೊದಿಸಿ ಸನ್ಮಾನಿಸಲಾಯಿತು.

ಸಮಾರಂಭದಲ್ಲಿ ಸ್ಥಳೀಯ ಪುಟಾಣಿಗಳಿಂದ ನೃತ್ಯ ಪ್ರದರ್ಶನ, ಸಾಂಪ್ರದಾಯಿಕ ಸೋಭಾನೆ ಹಾಡುಗಳು, ಸುಗಮ ಸಂಗೀತ ಪ್ರೇಕ್ಷಕರನ್ನು ರಂಜಿಸಿದರೆ ಬೆಂಗಳೂರಿನ ಶ್ರೀ ಅಮ್ಮಾಜೀರ ಪೊನ್ನಪ್ಪ ತಂಡ ಮತ್ತು ಶ್ರೀ ಕೊಂಪುಳೀರ ಗಣೇಶ ತಂಡದವರಿಂದ ಮನತಣಿಸುವ ಜಾನಪದ ಕೋಲಾಟ ನೃತ್ಯಗಳು ಪ್ರೇಕ್ಷಕರ ಮನರಂಜಿಸಿದವು. 'ಚೋಟಿ ಮಮ್ಮಿ' ಲಘು ಹಾಸ್ಯ ಪ್ರಹಸನ ಪ್ರೇಕ್ಷಕರನ್ನು ಒಂದೆರಡು ನಿಮಿಷ ನಗೆಗಡಲಲ್ಲಿ ತೇಲಿಸಿತು.

ಸಮಾಜದ ವತಿಯಿಂದ ಏರ್ಪಡಿಸಲಾದ ಲಘು ಕ್ರೀಡಾ ಕಾರ್ಯಕ್ರಮದಲ್ಲಿ ವಿಜೇತರಾದವರಿಗೆ ಅಧ್ಯಕ್ಷರಾದ ಶ್ರೀ ಪಾಣತ್ತಲೆ ಬಾಲಕೃಷ್ಣನವರು ಬಹುಮಾನ ವಿತರಿಸಿ ಮಾತನಾಡುತ್ತ, ಮುಂದಿನ ವರ್ಷದ ಸಮಾರಂಭವು ಸಮಾಜದ ಯೋಜಿತ ಕಟ್ಟಡದಲ್ಲಿ ನಡೆಯುವಂತಾಗಲು ಸರ್ವರೂ ತಮ್ಮ ತನು–ಮನ–ಧನದಿಂದ ಸಹಾಯ ಸಹಕಾರವನ್ನು ನೀಡುವಂತೆ ಕರೆನೀಡಿದರು.

ಗೌಡ ಸಮಾಜದ ಗೌ|| ಕಾರ್ಯದರ್ಶಿ ಶ್ರೀ ಜೈನೀರ ವೆಂಕಟೇಶ್‌ನವರು ಸರ್ವರನ್ನು ಸ್ವಾಗತಿಸಿದರೆ, ಶ್ರೀ ಪುಳಕಂಡ್ರ ಮುತ್ತಪ್ಪನವರಿಂದ ಪ್ರಾಸ್ತಾವಿಕ ಭಾಷಣ, ಕಾರ್ಯಕ್ರಮವನ್ನು ಶ್ರೀ ಮಳ್ಳಂದಿರ ಲಾಕ್ಷಪತಿಯವರು ನಿರೂಪಿಸಿದರೆ, ಸಮಾಜದ ಸಹ ಕಾರ್ಯದರ್ಶಿ ಶ್ರೀ ಕಟ್ಟೆಮನೆ ಜನಾರ್ಧನರವರು ಸರ್ವರನ್ನು ವಂದಿಸಿದರು. ●

## ಚಿಂತನ : — : ಅಪರಾಧದ ವೈಭವೀಕರಣ

ಭಗತ್ ಸಿಂಗ್‌ನ ಬಗ್ಗೆಯಾಗಲಿ, ಸುಭಾಷ್ ಚಂದ್ರ ಬೋಸರ ಮೇಲಾಗಲಿ ಯಾರೂ ಸಿನೇಮ ತೆಗೆಯುವ ಸಾಹಸ ಮಾಡಲಿಲ್ಲ. ಆದರೆ ಫೂಲನ್ ದೇವಿ ಬಗ್ಗೆ, ವೀರಪ್ಪನ್‌ನ ಸಾಹಸದ ಸಿನೇಮಾ ತೆಗೆಯಲು ಎಷ್ಟು ಅವಸರ ಈ ಜನಕೆ ? ಸಿನೇಮ ತೆಗೆದೂ ಆಯಿತು, ಜನರಿಗೆ ತೋರಿಸಿ ನಿರ್ಮಾಪಕರು ದುಡ್ಡು ಮಾಡಿಯೂ ಆಯಿತು. ಇಲ್ಲಿ ನಿರ್ಮಾಪಕ/ನಿರ್ದೇಶಕರದ್ದೇನೂ ತಪ್ಪಿಲ್ಲ. ಅವರು ಜನರನ್ನು ಆಕರ್ಷಿಸಬಲ್ಲ ಚಿತ್ರ ಕಥೆಯನ್ನು ಆಯ್ದುಕೊಂಡು ಹಣ ಹಾಕುತ್ತಾರೆ. ದುಷ್ಟ ನೊಣಕ್ಕೆ ತಿಪ್ಪೆಯೇ ಶ್ರೇಷ್ಠ ಎಂದಹಾಗೆ ಏನಾಗಿದೆ ಈ ಜನರಿಗೆ. ಒಳ್ಳೆಯದನ್ನು ನೋಡಿ ಏಕೆ ಆನಂದಿಸುವುದಿಲ್ಲ.

ಇಂದು ಸಿನೇಮ ಕಾದಂಬರಿಗಳಲ್ಲಿ ಆಗಲಿ ಅಪರಾಧವನ್ನು ವೈಭವೀಕರಿಸಿ ಚಿತ್ರಿಸಲಾಗುತ್ತದೆ. ಒಬ್ಬ ಅಪರಾಧಿಯ ಹಿನ್ನೆಲೆಯನ್ನು ಅವನು ಅಪರಾಧಿಯಾಗಲು ಸಮಾಜವೇ ಕಾರಣ

**ಕುಂಭಗೌಡನ ರಂಜಿತ್**, ಮುಕ್ಕಂದೂರು.

ಎಂಬ ಭಾವನೆ ಬರುವಂತೆ ತೋರಿಸಲಾಗುತ್ತದೆ. ಅಪರಾಧಿಯು ಪೂರ್ವದಲ್ಲಿ ಅನುಭವಿಸಿದ ನೋವು ಶೋಷಣೆ ಅಪಮಾನವನ್ನು ಒಂದಕ್ಕೆ ಹತ್ತರಷ್ಟು ದೊಡ್ಡದು ಮಾಡಿ ತೋರಿಸಿ ಮುಂದೆ ಅವನು ಎಸಗುವ ಕೃತ್ಯಗಳನ್ನು ಜನರಿಗೆ ಹೆಚ್ಚು ನಿಷ್ಠೂರವಾಗಿ ತೋರದಂತೆ ಚಿತ್ರಿಸಬಿಡುತ್ತಾರೆ. ಇದರಿಂದ ಬಾವಿ ಅಪರಾಧಿಗಳಿಗೆ ಪ್ರೋತ್ಸಾಹ ಸಿಕ್ಕಂತಾಗಿ ತಾವು ಮಾಡುವ ಅಪರಾಧಕ್ಕೆ ಸಮಾಜ ಸಹಾನುಭೂತಿ ವ್ಯಕ್ತಪಡಿಸುತ್ತದೆ ಎನ್ನುವ ಭ್ರಮೆ ಉಂಟಾಗಿ ಅಪರಾಧ ಒಂದು ಕಲೆ, ಒಂದು ಉದ್ಯೋಗ ಎನ್ನುವ ಧೋರಣೆಯನ್ನು ತಳೆಯುತ್ತಾರೆ. ಫೂಲನ್ ದೇವಿಯ ಕಥೆಯನ್ನಾಧರಿಸಿ ತೆಗೆದ ಸಿನೇಮದಲ್ಲಿನ ಒಂದು ಸಂದರ್ಭ, ಸಂಭಾಷಣೆ ಹೀಗಿದೆ. ಫೂಲನ್ ದೇವಿ ಮೊದಲ ಕೊಲೆ ಮಾಡಿರುತ್ತಾಳೆ. ಆ ಸಂದರ್ಭದಲ್ಲಿ ದರೋಡೆಕೋರರ ತಂಡದ ನಾಯಕ ಹೇಳುತ್ತಾನೆ. ಈಗ ನೀನು ಒಂದು ಕೊಲೆ ಮಾಡಿರುವೆ ಈಗ ನೀನು ಪೊಲೀಸರ ಕೈಗೆ ಸಿಕ್ಕರೆ ನಿನಗೆ ಜೀವಾವಧಿ ಶಿಕ್ಷೆ ಅಥವಾ ಗಲ್ಲೂ ಆಗಬಹುದು. ಆದರೆ ನೀನು ಇನ್ನೂ ಹತ್ತಾರು ಕೊಲೆಗಳನ್ನು ಮಾಡಿದಾಗ ಪೊಲೀಸ್ ಇಲಾಖೆಯಲ್ಲಿ ಸರಕಾರವೇ ಮುಂದೆ ಬಂದು ನಿನ್ನ ಶರಣಾಗತಿಗಾಗಿ ಮನವಿ ಮಾಡಿಕೊಂಡು ನಿನಗೆ ಹೆಚ್ಚು ಮರ್ಯಾದೆ ಕೊಟ್ಟು ನಿನ್ನ ಅಪರಾಧವನ್ನು ಮನ್ನಿಸಿ ಕನಿಷ್ಟ ಶಿಕ್ಷೆಗೆ ಒಳಪಡಿಸುವುದಾಗಿ ವಿನಂತಿಸಿಕೊಳ್ಳುತ್ತದೆ ಎಂದು.

ವಿಧಾನಸಭೆ ಲೋಕಸಭೆಗಳಿಗೆ ಚುನಾವಣೆ ಘೋಷಣೆ ಆದಾಗ ಎಲ್ಲಾ ರಾಜಕೀಯ ಪಕ್ಷಗಳು ಅಪರಾಧ ಹಿನ್ನೆಲೆ ಹೊಂದಿರುವಂತಹ ವ್ಯಕ್ತಿಗಳಿಗೆ ಟಿಕೆಟು ಕೊಡಲಾಗುವುದಿಲ್ಲ ಎನ್ನಲಾಗುವುದಿಲ್ಲ ಎನ್ನುತ್ತಾರೆ. ಇದು ಎಷ್ಟರ ಮಟ್ಟಿಗೆ ಸತ್ಯ ಎನ್ನುವುದು ಎಲ್ಲರಿಗೂ ತಿಳಿದೇ ಇದೆ. ಅಪರಾಧ ಹಿನ್ನೆಲೆ ಹೊಂದಿರುವಂತ ವ್ಯಕ್ತಿಗೆ ಟಿಕೆಟು ನೀಡಿದ ಬಗ್ಗೆ ಪ್ರಶ್ನಿಸಿದರೆ ಕೇವಲ FIR ಸಲ್ಲಿಸಿದ ಮಾತ್ರಕ್ಕೆ ಒಬ್ಬರನ್ನು ಅಪರಾಧಿ ಎಂದು ತೀರ್ಮಾನಿಸಲಾಗುವುದಿಲ್ಲವೆಂದು, ಮೊಕದ್ದಮೆ ನ್ಯಾಯಾಲಯದಲ್ಲಿ ಇದೆಯೆಂದೂ, ಇನ್ನೂ ತೀರ್ಪು ಹೊರಬರಲಿಲ್ಲವೆಂದೂ ತಮ್ಮ ಅಭ್ಯರ್ಥಿಯ ಪರ ನಿಲ್ಲುತ್ತಾರೆ.

ಸಮಾಜದಲ್ಲಿ ಅನೇಕ ದೋಷಗಳಿರಬಹುದು, ಕೆಲವರಿಗೆ ಕಷ್ಟ ನಷ್ಟಗಳಾಗಿರಬಹುದು, ಅಪಮಾನವಾಗಿರಬಹುದು. ಆದರೆ ಹೀಗೆ ಸಮಾಜದಿಂದ ಶೋಷಿತರಾದವರೆಲ್ಲಾ ಅಪರಾಧಿಗಳಾಗಬೇಕಾಗಿಲ್ಲ. ಅವರಿಗೆ ಸಭ್ಯರಾಗಿ ಬಾಳಲು ನೂರಾರು ಮಾರ್ಗಗಳಿರುತ್ತದೆ. ಸಿಟ್ಟಿನ ಕೈಗೆ ವಿವೇಕವನ್ನು ಕೊಟ್ಟು ನಮ್ಮ ಬಾಳನ್ನು ಸುಟ್ಟುಕೊಳ್ಳಬಾರದಲ್ಲವೇ ?

ನಾವು ಅಪರಾಧವನ್ನು ವೈಭವೀಕರಿಸಿ ತೋರಿಸುವ ಸಿನೇಮಾ ನೋಡಬಾರದು, ಅಂತಹ ಕಾದಂಬರಿ ಓದಬಾರದು. ಅಪರಾಧವನ್ನು ಖಡಾಖಂಡಿತವಾಗಿ ಖಂಡಿಸಬೇಕು. ಅಪರಾಧಿಯು ಹಿನ್ನೆಲೆ ಏನೇ ಇರಲಿ ಅಪರಾಧ ಅಪರಾಧವೇ. ಈ ರೀತಿಯ ಮನೋಭಾವನೆ ತಳೆಯದಿದ್ದರೆ ಮುಂದೆ ಅಪರಾಧಿಗಳೆಲ್ಲಾ ಹೀರೋಗಳಾಗಿ ಸಜ್ಜನರೆಲ್ಲಾ ಬೆಪ್ಪರಾಗುತ್ತಾರೆ.

## ನಿಮಗಿದು ತಿಳಿದಿರಲಿ

* ಎರಡನೇ ವಿಶ್ವ ಸಮರದ ಸಮಯದಲ್ಲಿ ಅಮೆರಿಕವು ಅಣುಬಾಂಬನ್ನು ಅಭಿವೃದ್ಧಿ ಪಡಿಸಲು ನಡೆಸಿದ ರಹಸ್ಯವಾದ ಯೋಜನೆಯ ಹೆಸರು—ಮ್ಯಾನ್ ಹಟನ್ ಯೋಜನೆ.
* ಎಡ್ವರ್ಡ್ ಎಂಬ ಹೆಸರನ್ನು ಚಿಕ್ಕದಾಗಿ–'ಟೆಡ್' ಎಂದು ಕರೆಯಲಾಗುತ್ತದೆ.
* ಕಾಶ್ಮೀರದ ದೋಣಿಗಳಿಗೆ 'ಶಿಕಾರ' ಎಂದು ಕರೆಯುತ್ತಾರೆ.

—ಸಂಗ್ರಹ : ಪ್ರೇಮ.

# ನಾನು ನಾಗಭೂಷಣನಾದೆ

ಕೊಡಗಿನ ಹಳ್ಳಿಗಳ ಸುತ್ತಮುತ್ತಲಿನ ಕಾಡುಗಳಲ್ಲಿ ಸಣ್ಣ ಪುಟ್ಟ ಕಾಡುಗಳು ಸಾಕಷ್ಟಿದ್ದ ಕಾಲ. ಮೊಲ, ಕಬ್ಬೆಕ್ಕು ಕತ್ರಿ [ಕಸ್ತೂರಿ] ಬೆಕ್ಕು, ಬರಿಕ, ಮುಳ್ಳಂದಿ, ಕ್ಯಾಮ [ಕಾಡು ಮೇಕೆ] ಮೊದಲಾದವುಗಳು ವಿನಾಶದ ಕನಸು ಕಂಡಿರಲಿಲ್ಲ. ಮೊಲ, ಮುಳ್ಳಂದಿಯಂತಹ ಪ್ರಾಣಿಗಳು ರೈತರಿಗೆ ಉಪದ್ರವ ಕೊಡುತ್ತವೆ. ಕಬ್ಬೆಕ್ಕು, ಕತ್ರಿ ಬೆಕ್ಕುಗಳಂತಹವುಗಳು ಇಲಿಗಳಂತಹ ಪಿಡುಗು ಪ್ರಾಣಿಗಳನ್ನು ತಿಂದುಹಾಕಿ ರೈತರಿಗೆ ಉಪಕಾರ ಮಾಡುತ್ತವೆ.

8–10 ವರ್ಷಗಳ ಹಿಂದೆ ಕೊಡಗಿನಲ್ಲಿ ಮೊಲಗಳ ಹಾವಳಿ ತುಂಬ ಹೆಚ್ಚಾಗಿತ್ತು. ಭತ್ತದ ನಾಟಿಯನ್ನು ಕತ್ತರಿಸಿ ಹಾಕುತ್ತಿದ್ದವು. ಚಿಟ್ಟು [ಬೀನ್ಸ್] ಗಿಡಗಳನ್ನು ತಿಂದು ಹಾಕುತ್ತಿದ್ದವು. ಮನೆಯ ಸುತ್ತಮುತ್ತ ಪೊದೆಗಳಲ್ಲಿ, ಬಿಲಗಳಲ್ಲಿ ವಾಸಮಾಡಿಕೊಂಡಿರುತ್ತಿದ್ದರೂ ಮನುಷ್ಯರ ಕಣ್ಣುತಪ್ಪಿಸಿ ಉಪದ್ರವ ಕೊಡುತ್ತಿದ್ದವು.

ಬೈತಡ್ಕ ಹೇಮ ಕುಂಜಪ್ಪ, ಪುತ್ತೂರು

ಆ ವರ್ಷ ನಾವು ಮನೆಯಿಂದ ಸ್ವಲ್ಪ ದೂರದಲ್ಲಿ ಹೊಸ ಜಾಗ ಮಾಡಿ ಚಿಟ್ಟಿನ ಬೀಜ ಹಾಕಿದ್ದೆವು. ಕಾಳುಗಳು ಚೆನ್ನಾಗಿ ಹುಟ್ಟಿಬಂದಿದ್ದವು. ಹಂದಿ ಕೋಳಿಗಳಿಂದ ತೊಂದರೆಯಾಗದಂತೆ ಸರಿಯಾಗಿ ಬೇಲಿ ಹಾಕಿದ್ದೆವು. ಕೆಲವು ಹಕ್ಕಿಗಳು ಎಳೆಯ ಗಿಡದ ಕಾಂಡಗಳಿಗೆ ಅಂಟಿಕೊಂಡಿರುವ ಬೀಜದಳಗಳನ್ನು ತಿಂದು ತೊಂದರೆ ಕೊಡುತ್ತವೆ. ಅವುಗಳನ್ನು ಬೆದರಿಸಲು ಬಿಳಿಯ ರಟ್ಟುಗಳನ್ನು ಎತ್ತರದ ದೊಣ್ಣೆಗಳಿಗೆ ಕಟ್ಟಿದ್ದೆವು. ಈ ರಟ್ಟುಗಳು ಗಾಳಿಗೆ ಪಟ ಪಟ ಹೊಡೆದುಕೊಂಡಾಗ ಹಕ್ಕಿಗಳು ಹೆದರಿ ಓಡಿಹೋಗುತ್ತವೆ.

ಗಿಡಗಳು ಹುಟ್ಟಿ ಎರಡೆಲೆ ಬಿಟ್ಟಿದ್ದವು. ಬೀಜ ದಳಗಳು ಇನ್ನೂ ಕಾಂಡದಿಂದ ಉದುರಿರಲಿಲ್ಲ. ಅಷ್ಟರಲ್ಲಿ ಅದಕ್ಕೆ ಮೊಲದ ಕಾಟ ಸುರುವಾಯಿತು. ಗಿಡಗಳನ್ನು ತಿಂದು ಎರಡೇ ದಿನಗಳಲ್ಲಿ ತುಂಬ ನಷ್ಟ ಮಾಡಿತು. ಚಿಟ್ಟು ತೋಟವನ್ನು ಮೊಲ ಕಂಡರೆ ಮತ್ತೆ ಅದರ ಕಾಟವನ್ನು ತಪ್ಪಿಸುವುದು ಕಷ್ಟ. ಅದಕ್ಕೆ ಹೆದರಿಕೆಯಾದರೆ ಬರುವುದನ್ನು ಬಿಡುತ್ತದೆ. ಇಲ್ಲದಿದ್ದರೆ ಕೊಂದುಹಾಕಬೇಕಷ್ಟೆ.

ಮೊಲಗಳನ್ನು ಹೆದರಿಸಲು ಬೆರ್ಚಪ್ಪ [ಬೆದರುಗೊಂಬೆ] ಗಳನ್ನು ನಿಲ್ಲಿಸುತ್ತಾರೆ. ಇವುಗಳನ್ನು ರಾತ್ರಿ ಕಂಡಾಗ ಮನುಷ್ಯನೇ ಇರಬೇಕೆಂದು ಭ್ರಮಿಸುವ ಮೊಲಗಳು ಆ ಕಡೆ ಬರುವುದನ್ನು ನಿಲ್ಲಿಸುತ್ತವೆ. ಹೀಗೆ ಒಂದು ಬೆರ್ಚಪ್ಪನನ್ನು ತೋಟದಲ್ಲಿ ನಿಲ್ಲಿಸುವುದು ಒಳ್ಳೆಯದೆಂದು ನಾವು ನಿರ್ಧರಿಸಿದೆವು. ಮಾಮೂಲಿನಂತೆ ಒಣಹುಲ್ಲಿನ ಕಂತೆಯಿಂದ ಬೆರ್ಚಪ್ಪನನ್ನು ಮಾಡಿ ಅದಕ್ಕೆ ಬಿಳಿಯ ಬಟ್ಟೆಯನ್ನು ಹೊದಿಸಿದೆವು. ಎಲ್ಲಾ ಕಡೆಯಲ್ಲೂ ಚೆನ್ನಾಗಿ ಕಾಣುವಂತೆ ತೋಟದ ಮಧ್ಯದಲ್ಲಿ ನನ್ನ ಪತಿರಾಯರು ಬೆರ್ಚಪ್ಪನನ್ನು ನಿಲ್ಲಿಸಿದರು.

ಆಮೇಲೆ 2–3 ದಿನ ಮೊಲ ತೋಟಕ್ಕೆ ಬರಲಿಲ್ಲ. ಆದರೆ ತೋಟದ ಇನ್ನೊಂದು ಬದಿಯಲ್ಲಿ ಮತ್ತೆ ಅದರ ಕಾಟ ಸುರುವಾಯಿತು. ಇನ್ನು ಅದನ್ನು ಗುಂಡು ಹೊಡೆದು ಕೊಲ್ಲುವುದೇ ಒಳ್ಳೆಯದೆಂದು ನಮ್ಮವರಿಗೆ ಹೇಳಿದೆ. ಅವರದೂ ಅದೇ ಅಭಿಪ್ರಾಯವಾಗಿತ್ತು. ಹುಣ್ಣಿಮೆಯ ದಿನ ಹತ್ತಿರವಿದ್ದುದರಿಂದ ತಿಂಗಳ ಬೆಳಕು ಚೆನ್ನಾಗಿತ್ತು. ಒಳಿ ಕುಳಿತು [ಅವಿತು ಕುಳಿತು] ಅದಕ್ಕೆ ಗುಂಡು ಹೊಡೆಯಲು ನಮ್ಮವರು ನಿರ್ಧರಿಸಿದರು.

ತೋಟಕ್ಕೆ ಹೋಗಿ ಬೆರ್ಚಪ್ಪನನ್ನು ತೆಗೆದು ಮರೆಯಾದ ಜಾಗದಲ್ಲಿ ಹಾಕಿದರು. ಬೇಲಿಯ ಒಂದು ಮೂಲೆಯಲ್ಲಿ ಕೊಕ್ಕಾರ್ಜಿ ಮುಳ್ಳಿನ ಪೊದೆ ಇತ್ತು. ಒಳಿಕೂರಲು ಅದು ಸರಿಯಾದ ಸ್ಥಳವಾಗಿತ್ತು. ಅದರ ತಳದಲ್ಲಿದ್ದ ಮುಳ್ಳುಗಳನ್ನು ಸವರಿ ಕುಳಿತುಕೊಳ್ಳಲು ಅನುಕೂಲ ಮಾಡಿ 'ಒಳಿ' ಮಾಡಿದರು. ಮೊಲಕ್ಕೆ ಯಾವುದೂ ಕೃತಕವಾಗಿ ಕಾಣದಂತೆ ಏರ್ಪಾಡು ಮಾಡಿದ್ದರು.

ಮೊಲ ಸೂರ್ಯ ಮುಳುಗಿದ ಸ್ವಲ್ಪ ಹೊತ್ತಿನಲ್ಲೇ ಆಹಾರ ಹುಡುಕುತ್ತಾ ಹೊರಡುತ್ತದೆ. ಚಿಟ್ಟು ತೋಟವನ್ನು ಕಂಡಮೇಲೆ ನೇರವಾಗಿ ಅಲ್ಲಿಗೇ ಹೋಗುತ್ತದೆ. ಆದುದರಿಂದ ನಮ್ಮವರು ಸಂಜೆ 6–30ರ ಹೊತ್ತಿಗೆ ಊಟ ಮುಗಿಸಿದರು. ಚಳಿಯ ಸಮಯವಾದುದರಿಂದ ಮಿಲಿಟರಿ ಸ್ವೆಟರ್ ಹಾಕಿ, ತಲೆಗೆ ಉಲ್ಲನ್ ಮಫ್ಲರ್ ಸುತ್ತಿಕೊಂಡರು. ಡಬಲ್ ಬ್ಯಾರಲ್ ಬ್ರೀಚ್‌ಲೋಡ್ ಕೋವಿಯನ್ನು, ಕತ್ತಿ ಮತ್ತು ಟಾರ್ಚನ್ನು ತೆಗೆದುಕೊಂಡು, 'ಬಾಗಿಲು ಚೆನ್ನಾಗಿ ಹಾಕಿಕೊಂಡಿರು, ನಾನು ಬರುವಾಗ ತಡವಾದೀತು, 11 ಗಂಟೆಯವರೆಗೆ ಕೂತೇ ಬರುತ್ತೇನೆ' ಎಂದು ಹೇಳಿ ತೋಟಕ್ಕೆ ಹೋದರು.

ಅವರು ಹೋಗಿ ಸುಮಾರು ಒಂದು ಘಂಟೆ ಕಳೆದಿರಬಹುದು ವಾಪಾಸು ಬಂದು ಬಿಟ್ಟರು. ಅವರು ಹಾಗೆ ವಾಪಾಸು ಬಂದದ್ದು ಕಂಡು ನನಗೆ ಗಾಬರಿಯಾಯಿತು. 'ಏನು ವಿಷಯ? ಇಷ್ಟು ಬೇಗ ಬಂದುಬಿಟ್ರಿ' ಎಂದು ಕೇಳಿದೆ. ಅವರು ಕೊಟ್ಟ ಉತ್ತರವನ್ನು ಅವರ ಮಾತಿನಲ್ಲೇ ಕೇಳೋಣ.

'ನಾನು ತೋಟಕ್ಕೆ ಹೋಗಿ ಒಳಿಯಲ್ಲಿ ಕಲ್ಲಿನ ಕಂಬದಂತೆ ನಿಶ್ಚಲವಾಗಿ ಕುಳಿತಿದ್ದೆ. ಮೊಲಕ್ಕೆ ಬಹಳ ಸೂಕ್ಷ್ಮ. ಸ್ವಲ್ಪ ಚಲನೆ ಕಂಡರೂ ಓಡಿಬಿಡುತ್ತದೆ. ಕತ್ತಿ ಮತ್ತು ಟಾರ್ಚನ್ನು ಬದಿಯಲ್ಲಿ ಇಟ್ಟಿದ್ದೆ. ಕೋವಿ ತೊಡೆಯಮೇಲೆ ಇತ್ತು.

ಆಗ ಸ್ವಲ್ಪ ಹೊತ್ತಿಗೆ ಮೊದಲು ನನ್ನ ಎಡತೊಡೆಯ ಮೇಲೆ ಏನೋ ಹರಿಯುತ್ತಿರುವಂತೆ ಸ್ಪರ್ಶಜ್ಞಾನವಾಯಿತು. ಮೆಲ್ಲನೆ ಕತ್ತು ಬಗ್ಗಿಸಿ ನೋಡಿದೆ ಒಂದು ದೊಡ್ಡ ಸರ್ಪ ನನ್ನ ತೊಡೆಯ ಮೇಲೆ ಹತ್ತಿ ಸೊಂಟದವರೆಗೆ ಹರಿದು ಬಂದಿತ್ತು. ಮೆಲ್ಲನೆ ಮುಂದುವರೆಯುತಿತ್ತು. ಏನು ಮಾಡಬೇಕೆಂದು ನನಗೆ ಹೊಳೆಯಲೇ ಇಲ್ಲ ಎದ್ದು ಓಡಿಬಿಡಲೇ? ಅಲುಗಾಡಿದರೆ ಅದು ನನ್ನನ್ನು ಕಡಿಯುವುದು ಖಂಡಿತವಾಗಿತ್ತು. ಕತ್ತಿಯಿಂದ ಕಡಿದುಬಿಡಲೇ ? ಅದು ನನ್ನ ತೊಡೆಯಮೇಲೇ ಇತ್ತು. ನನ್ನ ತಲೆಯಲ್ಲಿ ಏನೇನೋ ಯೋಚನೆಗಳು ತುಂಬಿಹೋದವು. ಈ ಯೋಚನೆಗಳ ಎಡೆಯಲ್ಲಿ ಹಾವು ಆಕಸ್ಮಿಕ ಮೈಮೇಲೇನಾದರು ಬಂದು ಬಿಟ್ಟರೆ ಅಲುಗಾಡದೆ ನಿಂತುಬಿಡಬೇಕು. ಅದರಷ್ಟಕ್ಕೆ ಅದು ಹರಿದು ಹೋಗಿಬಿಡುತ್ತದೆ. ಗಡಿಬಿಡಿ ಮಾಡಿದರೆ ಹೆದರಿ ಕಚ್ಚಿಬಿಡುತ್ತದೆ ಎಂದು ಯಾರೋ ಹೇಳಿದ್ದ ಮಾತು ನೆನಪಿಗೆ ಬಂತು. ಕಲ್ಲಿನಂತೆ ಕುಳಿತುಬಿಟ್ಟೆ. ಉಸಿರನ್ನು ಕೂಡ ನಿಧಾನ ಮಾಡಿಬಿಟ್ಟೆ. ಈ ಧೈರ್ಯ ಎಲ್ಲಿಂದ ಬಂತೋ ನನಗೇ ಗೊತ್ತಿಲ್ಲ.

ಅದು ಹಾಗೆಯೇ ನಿಧಾನವಾಗಿ ಹರಿಯುತ್ತಾ ನನ್ನ ಎಡ ಭುಜದ ಮೇಲೆ ಬಂದಿತು ಅಲ್ಲಿಂದ ಕುತ್ತಿಗೆಯ ಹಿಂಭಾಗಕ್ಕಾಗಿ ಮುಂದೆ ಹರಿದು ಬಲಭುಜದ ಮೇಲೆ ಬಂದು ಸುಮಾರು ಅರ್ಧ ಅಡಿ ದೂರಕ್ಕೆ ಗಾಳಿಯಲ್ಲಿ ತಲೆಯನ್ನು ಎದುರಿಗೆ ಚಾಚಿ ಒಂದು ನಿಮಿಷ ಹಾಗೆಯೇ ನಿಂತುಬಿಟ್ಟಿತು. ಆಗ ನಾನು ನಾಗಭೂಷಣನಾದೆ. ಆಮೇಲೆ ಅದಕ್ಕೆ ಏನೋ ಸಂದೇಹ ಬಂದಿರಬೇಕು. ನನ್ನ ಉಸಿರಿನ ಬಿಸಿಗಾಳಿ ಅದಕ್ಕೆ ಸೋಂಕಿರಬೇಕು. ಜೋರಾಗಿ ಹೊಡೆದುಕೊಳ್ಳುತ್ತಿದ್ದ ನನ್ನ ಹೃದಯದ ಬಡಿತದ ಶಬ್ಧ ಕೇಳಿರಬೇಕು. ನಾನು ಜಡವಸ್ತು ಅಲ್ಲವೆಂಬ ಸಂದೇಹ ಬಂದರೂ ಬಂದಿರಬಹುದು. ಕಾರಣ ಏನೋ ಅದಕ್ಕೇ ಗೊತ್ತು. ಹೆಡೆಯನ್ನು ಅರ್ಧ ಬಿಚ್ಚಿಕೊಂಡು ಬಲತೋಳಿನ ಮೇಲಿನಿಂದ ಸರಸರನೆ ಇಳಿದು ಹೋಗಿ ಬೇಲಿಯ ಎಡೆಯಲ್ಲಿ ಮಾಯವಾಯಿತು. ಇನ್ನು ಅಲ್ಲಿ ಕುಳಿತುಕೊಳ್ಳಲು ಸಾಧ್ಯವೇ ? ಎಂದು ನನ್ನ ಮುಖ ನೋಡಿದರು. ಅವರ ಮಾತುಗಳನ್ನು ಕೇಳಿ ಹೆದರಿಕೆಯಿಂದ ನನ್ನ ಮುಖ ಬಿಳಿಚಿಹೋಗಿತ್ತು. ಮಾನವರಿಗೆ ಧೈರ್ಯ ಮತ್ತು ದೈವಬಲದ ಕೃಪೆಯಿರಬೇಕು. ನನ್ನವರ ಪ್ರಾಣ ಉಳಿಸಿದ ದೇವರಿಗೆ ಮನಸ್ಸಿನಲ್ಲಿಯೇ ಪ್ರಾರ್ಥನೆ ಸಲ್ಲಿಸಿದೆ. ●

## ಕೊಡಗು ಜಿಲ್ಲಾ ಮಟ್ಟದ ಸಂಗಂ ಟ್ರೋಫಿ ಫುಟ್ಬಾಲ್ ಪಂದ್ಯಾವಳಿ

ಮರಗೋಡು ಸಮೀಪದ ಹೊಸ್ಕೇರಿ ಗ್ರಾಮದ ಕೆಲವು ಹಿರಿಯರ ಮಾರ್ಗದರ್ಶನದಲ್ಲಿ ಹಲವು ಉತ್ಸಾಹಿ ಯುವಕರಿಂದ ಕೂಡಿದ ಸಂಘವೇ ಸಂಗಂ ಯುವಕ ಸಂಘ. ಈ ಸಂಘವು ತನ್ನ 5ನೆಯ ವರ್ಷದ ಜಿಲ್ಲಾ ಮಟ್ಟದ ಸಂಗಂ ಟ್ರೋಪಿ ಪುಟ್ಬಾಲ್ ಪಂದ್ಯಾವಳಿಯು ದಿನಾಂಕ 7-11-98 ರಿಂದ 14-11-98ರ ವರೆಗೆ ಮರಗೋಡಿನ ಭಾರತೀ ಸಂಯುಕ್ತ ಪದವಿ ಪೂರ್ವ ಕಾಲೇಜಿನ ಕ್ರೀಡಾಂಗಣದಲ್ಲಿ ನೆರೆದಿದ್ದ ಸಾವಿರಾರು ಪ್ರೇಕ್ಷಕರನ್ನು ರಂಜಿಸಿತು. ಈ ಪಂದ್ಯಾವಳಿಯಲ್ಲಿ 20 ತಂಡಗಳು ಭಾಗವಹಿಸಿದ್ದವು. ಇದರಲ್ಲಿ ವಿರಾಜಪೇಟೆಯ ಮೈಕ್ರೋಸ್ಟಾರ್ ಮತ್ತು ಮಡಿಕೇರಿಯ ಬ್ಲೂ ಬರ್ಡ್ಸ್ ತಂಡಗಳು ಫೈನಲ್ ಹಂತವನ್ನು ತಲುಪಿದವು 14-11-98ರ ಫೈನಲ್ ಪಂದ್ಯವು ಮೇಲಿನ ಎರಡು ತಂಡಗಳ ನಡುವೆ ನಡೆದು ವಿರಾಜಪೇಟೆಯ ಮೈಕ್ರೋಸ್ಟಾರ್ ತಂಡ 2-1 ಗೋಲಿನಿಂದ ವಿಜಯ ಸಾಧಿಸಿ, ಸಂಗಂ ಟ್ರೋಫಿಯನ್ನು ತನ್ನ ಮಡಿಲಿಗೇರಿಸಿಕೊಂಡಿತು. ಮಡಿಕೇರಿಯ ಬ್ಲೂ ಬರ್ಡ್ಸ್ ತಂಡವು ದ್ವಿತೀಯ ಸ್ಥಾನಕ್ಕೆ ತೃಪ್ತಿಗೊಂಡಿತು. ತೃತೀಯ ಸ್ಥಾನವನ್ನು ಕೊಡಗರಹಳ್ಳಿಯ ನೇತಾಜಿ ಯುವಕ ಸಂಘ ಪಡೆದುಕೊಂಡಿತು. ಈ ಪಂದ್ಯದ ವೀಕ್ಷಕ ವಿವರಣೆಯನ್ನು ಕಟ್ಟೆಮನೆ ಸೋನರವರು ಪ್ರೇಕ್ಷಕರ ಮನ ಸೂರೆಗೊಳ್ಳುವಂತೆ ನಿರೂಪಿಸಿದರು. ವಿಜೇತ ತಂಡಗಳಿಗೆ ಮಡಿಕೇರಿ ತಾಲ್ಲೂಕಿನ ಶಾಸಕ ದಂಬೆಕೋಡಿ ಮಾದಪ್ಪನವರು ಮತ್ತು ಕೊಡಗು ಜಿಲ್ಲಾಧಿಕಾರಿ ಶ್ರೀ ಎ.ಆರ್. ಜಯರಾಮ ರಾಜೇ ಅರಸ್ ಇವರುಗಳು ಟ್ರೋಫಿಯನ್ನು ಪ್ರಧಾನಮಾಡಿದರು.

ಮುಕ್ಕಾಟಿ ಮನೆ ದಿ|| ನೀಲ್‌ಕುಮಾರ್‌ರವರ ಜ್ಞಾಪಕಾರ್ತವಾಗಿ ಅವರ ತಾಯಿ ನೀಲಮ್ಮನವರು ಗೆದ್ದ ಮೂರು ತಂಡಗಳಿಗೂ ತಲ ಒಂದೊಂದು ಕಪ್‌ಗಳನ್ನು ನೀಡಿದರು.

ಸಮಾರಂಭದಲ್ಲಿ ಮದೆ ಕಾಲೇಜಿನ ಪ್ರಾಂಶುಪಾಲರಾದ ತೊತ್ತಿನ ಮಂದಣ್ಣ, ಜಿಲ್ಲಾ ಪಂ. ಸದಸ್ಯೆ ಮಾದೇಟಿರ ದೇವಮ್ಮ, ಆಕಾಶವಾಣಿಯ ಎಸ್. ಎಸ್. ಉಮೇಶ್, ತಾ|| ಪಂ. ಅಧ್ಯಕ್ಷ ಡಿ. ಬಿ. ಬಾಲಕೃಷ್ಣ, ಪತ್ರಕರ್ತ ಚಿದ್ವಿಲಾಸ್ ಮುಂತಾದವರು ಉಪಸ್ಥಿತರಿದ್ದರು. ಸಂಗಂ ಯುವಕ ಸಂಘದ ಅಧ್ಯಕ್ಷ ಐ. ಸಿ. ಲವಕುಮಾರರವರು ಸ್ವಾಗತಿಸಿ, ಕೊನೆಯಲ್ಲಿ ವಂದಿಸಿದರು.

ಅಂತೆಯೇ ಈ ಸಂಘವು ಮುಂದಿನ ವರ್ಷಗಳಲ್ಲಿ ರಾಜ್ಯ ಮಟ್ಟದ ಪಂದ್ಯವನ್ನು ನಡೆಸಲು ತೀರ್ಮಾನಿಸಿತು. ●

ವರದಿ : **ಮಾಳಿಗೆ ಮನೆ ಜನಾರ್ಧನ, ಮರಗೋಡು.**

ಸಂಖ್ಯೆಯಲ್ಲಿ ಭರ್ತಿ ಮಾಡಿ, ಅದರಲ್ಲೂ ಭಾಗಮಂಡಲಕ್ಕೆ ಹೆಚ್ಚಿನ ಆದ್ಯತೆ ಕೊಟ್ಟಿದ್ದಾರೆ.

1973ರಲ್ಲಿ ಗೃಹ ನಿರೀಕ್ಷಕರಾಗಿ ಮುಂಬಡ್ತಿ ಪಡೆದು ಖಾನಪುರಕ್ಕೆ ಬಂದು ಕ್ಯಾಂಟೀನ್, ಮೀನು ಸಾಕಾಣಿಕೆ, ಎಮ್ಮೆ ಸಾಕಾಣಿಕೆ ಕಸಬುಗಳನ್ನು ಕೈಗೆತ್ತಿಕೊಂಡು ಕಾರ್ಯ ನಿರ್ವಹಿಸಿದ್ದಾರೆ.

1976ರಲ್ಲಿ ಅಸಿಸ್ಟೆಂಟ್ ಕಮಾಂಡೆಂಟ್ ಆಗಿ ಪ್ರಮೋಷನ್ ಪಡೆದು ಧಾರವಾಡ ಜಿಲ್ಲೆಯಲ್ಲಿ ಹೊಸದಾಗಿ ನಿರ್ಮಿಸಿದ ಪೋಲೀಸ್ ಶಾಲೆಗೆ ಪ್ರಿನ್ಸಿಪಾಲರಾಗಿ ಹೊಸದಾಗಿ ಭರ್ತಿ ಆಗಿ ಬಂದ ಪೋಲೀಸ್ ಕಾನ್ಸ್‌ಟೇಬಲರುಗಳಿಗೆ ತರಬೇತಿ ಕೊಡುವ ಜವಾಬ್ದಾರಿಯನ್ನು ವಹಿಸಿದ್ದರು. ತಮ್ಮ ಸೇವಾವಧಿಯಲ್ಲಿ ಪ್ರಮಾಣಿಕವಾಗಿ ದುಡಿದು ಅಸಿಸ್ಟೆಂಟ್ ಕಮಾಂಡೆಂಟ್ ಹುದ್ದೆಯಿಂದ 1981ನೇ ಮಾರ್ಚ್ 31ರಂದು ರಾಯಪುರ ಧಾರವಾಡ ಜಿಲ್ಲೆಯಿಂದ ನಿವೃತ್ತಿ ಹೊಂದಿದರು.

ಇವರ ಅಧಿಕಾರ ವ್ಯಾಪ್ತಿಯಲ್ಲಿ ಶಿಸ್ತು, ಕಾನೂನು, ಅಡಿಯಲ್ಲಿ 2250 ಜನರಿಗೆ ಅವರ ಭವಿಷ್ಯ ರೂಪಿಸಿಕೊಟ್ಟ ನಿಮಿತ್ತ ತರಬೇತಿ ಐ.ಜಿ.ಪಿ. ಶ್ರೀ ವಿಜಯ ದೇವರಾಜೇಅರಸ್‌ರವರಿಂದ ಪ್ರಶಂಶಾರ್ಹ ಪತ್ರ ಪಡೆದಿದ್ದಾರೆ.

ಇವರಿಗೆ ವಹಿಸಿದ ಕಾರ್ಯಗಳನ್ನು ಧೈರ್ಯದಿಂದ, ಭಕ್ತಿಯಿಂದ, ವಿಧೇಯತನದಿಂದ ನಿರ್ವಹಿಸಲು ಇವರ ಮಾತಾ ಪಿತೃಗಳ ಆಶೀರ್ವಾದಗಳು ಅಲ್ಲದೆ ಪತ್ನಿಯ ಭಕ್ತಿಯಿಂದ ಹಾಗೂ ಇವರ ಕುಲದೇವರು ಶ್ರೀ ವೆಂಕಟರಮಣ ಸ್ವಾಮಿ ದಯದಿಂದ ಮತ್ತು ಇವರ ಮನೆಯಲ್ಲಿ ಆರಾಧಿಸುವ ಸರ್ವಶಕ್ತಿ ಶ್ರೀ ದುರ್ಗಿಯ ಕೃಪೆಯಿಂದ ರಾಷ್ಟ್ರಪ್ರಶಸ್ತಿ ಚಿನ್ನದ ಪೋಲೀಸ್ ಪದಕ ಪಡೆದುಕೊಳ್ಳಲು ಸಾಧ್ಯವಾಯಿತೆನ್ನುತ್ತಾರೆ ಇವರು. ಅರೆಭಾಷಿಕ ಗೌಡ ಜನಾಂಗದ ಕೊಡಗು ಮತ್ತು ದ. ಕ. ಜಿಲ್ಲೆಗೆ ಚಿನ್ನದ ಪದಕ ಪಡೆದವರಲ್ಲಿ ನಾನೇ ಮೊದಲಿಗರು ಎಂದು ಅವರೇ ಹೇಳುತ್ತಾರೆ. ಜನವರಿ 26, 1982ರಲ್ಲಿ ಇವರಿಗೆ ರಾಷ್ಟ್ರಪತಿಗಳ ಚಿನ್ನದ ಪದಕವೂ, ಕರ್ನಾಟಕದ ರಾಜ್ಯಪಾಲ ವಿ. ನಾರಾಯಣ್‌ರವರಿಂದ ಕೊಡಲ್ಪಟ್ಟಿತು.

1985 ರಲ್ಲಿ ದಕ್ಷಿಣ ಕನ್ನಡ ಮತ್ತು ಕೊಡಗು ಜಿಲ್ಲಾ ಗೌಡರ ಪ್ರಥಮ ಸಮ್ಮೇಳನದಲ್ಲಿ ಇವರಿಗೆ 1981 ರಲ್ಲಿ ರಾಷ್ಟ್ರೀಯ ಪ್ರಶಸ್ತಿ ಪಡೆದ ಗೌರವಾರ್ಥ ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದ ಶ್ರೀಮಾನ್ ಕುರುಂಜಿ ವೆಂಕಟರಮಣಗೌಡರ ಸಮ್ಮುಖದಲ್ಲಿ ಶ್ರೀ ಶ್ರೀ ಶ್ರೀ ಗಂಗಾಧರನಾಥ ಸ್ವಾಮಿಜಿಯವರ ಅಮೃತ ಹಸ್ತದಿಂದ ಬೆಳ್ಳಿ ಪದಕವನ್ನು ನೀಡಿ ಗೌರವಿಸಲಾಯಿತು.

ಇವರಿಗೆ 2 ಗಂಡು, 2 ಹೆಣ್ಣು ಮಕ್ಕಳು, ಹಿರಿಯ ಮಗ ಕಿಶೋರ್‌ಕುಮಾರ್ ಎಂ.ಕಾಂ., ಆಗಿ Lazer exporting ಕಂಪೆನಿಯಲ್ಲಿ ಉದ್ಯೋಗಿಯಾಗಿದ್ದಾರೆ. ಎರಡನೇ ಮಗ ಚಂದ್ರಶೇಖರ್ ಎಂ.ಎಸ್ಸಿ. ಆಗಿ ರೇಷ್ಮೆ ಇಲಾಖೆಯಲ್ಲಿ ಸಂಶೋಧನಾಧಿಕಾರಿಯಾಗಿದ್ದಾರೆ. ಹಿರಿಮಗಳು ಜಲಜಾಕ್ಷಿ ಜೋಡುಪಾಲದ ಬಾರಿಕೆ ಬಾಲಕೃಷ್ಣನವರ ಕೈಹಿಡಿದಿದ್ದಾರೆ. ಕಿರಿಯ ಮಗಳು ಶೋಭ ಜಪ್ಪೆಕೋಡಿ ರಾಜ ಉತ್ತಪ್ಪನವರ ಪತ್ನಿಯಾಗಿದ್ದಾರೆ.

ಶ್ರೀಯುತರು 1983 ರಿಂದ 1998ರ ತನಕ ಭಾಗಮಂಡಲ ಗೌಡ ಸಮಾಜದ ಹುಟ್ಟು ಮತ್ತು ಅಭಿವೃದ್ಧಿಗೆ ತನ್ನ ತನು, ಮನ, ಧನ ಅರ್ಪಿಸಿ ಕಟ್ಟಡಕ್ಕಾಗಿ ಊರೆಲ್ಲಾ ಸುತ್ತಿ ಧನ ಸಂಗ್ರಹಿಸಿ ದುಡಿದು ಕಿರಿಯರಿಗೆ ದಾರಿದೀಪ ತೋರಿಸಿ ನಿವೃತ್ತಿಯಾಗಿದ್ದಾರೆ. ಕುರುಂಜಿ ವೆಂಕಟರಮಣ ಗೌಡರ ಆಶ್ರಯದ K VG. I T I ಸ್ಥಾಪಿಸಲು ಸಾಕಷ್ಟು ನೆರವಾಗಿದ್ದಾರೆ. ಅಲ್ಲದೆ ಮೈಸೂರು ಗೌಡ ವಿದ್ಯಾ ಸಂಘ, ಗೌಡ ಸಮಾಜ, ತಾವೂರು ದೇವಸ್ಥಾನ, ಚೆಟ್ಟಿಮಾನಿ ಶಾಲೆ, ಸಿಂಗತ್ತೂರು ದೇವಸ್ಥಾನ, ಬಾರಿಕೆ ಕುಟುಂಬ ಸೊಸೈಟಿ, ಅಂಗನವಾಡಿ, ಸಮ್ಮೇಳನ ಇತ್ಯಾದಿ ಹತ್ತು ಹಲವು ಕ್ಷೇತ್ರಗಳಲ್ಲಿ ತನ್ನ ಕೈಲಾದ ಧನ ಸಹಾಯ ಮಾಡಿದ್ದಾರೆ. ಇವರು ಕಿರಿಯರಿಂದ ಕೀರ್ತಿ, ಶೌರ್ಯ, ಕ್ರೀಡಾ ಪ್ರಶಸ್ತಿಗಳನ್ನು ಬಯಸುತ್ತಾರೆ. ಕ್ರೀಡಾಭಿಮಾನದ ಕೊರತೆ ನಮ್ಮಲ್ಲಿ ಬಹಳವಿದೆಯೆಂದು ಕೊರಗುತ್ತಾರೆ. ಜನಾಂಗದ ಯುವ ಪೀಳಿಗೆಯಿಂದ ಕೊಡಗು ನಾಡಿನ ಕೀರ್ತಿ ಪತಾಕೆಯನ್ನು ಹಾರಿಸುವ ಮಕ್ಕಳನ್ನು ಬಯಸುತ್ತಾರೆ.

ಅಖಂಡ ಭರತ ಖಂಡದಲ್ಲಿ ನಿಶ್ವಾರ್ಥ ಸೇವೆಗೈದು, ರಾಷ್ಟ್ರಪತಿಗಳ ಚಿನ್ನದ ಪದಕ ಗಿಟ್ಟಿಸಿದ ಶ್ರೀಯುತರು ನಮ್ಮ ಜನಾಂಗದ ಕಣ್ಮಣಿಯಾಗಿದ್ದಾರೆ. ಇವರ ನಿವೃತ್ತ ಜೀವನವು ಸುಖಮಯ ನೆಮ್ಮದಿಯಾಗಿರಲೆಂದು ಮತ್ತು ಶ್ರೀಯುತರ ಸೂಕ್ತ ಸಲಹೆ, ಸಹಕಾರ, ಮತ್ತು ಅಮೋಘ ಸೇವೆಯು ತನ್ನ ಅಂತಿಮ ಕ್ಷಣದ ತನಕ ಜನಾಂಗಕ್ಕೆ ಮುಡುಪಾಗಿರಲಿ ಎಂದು ಶ್ರೀಯುತರಿಗೆ ಸಂಗಾತಿ ಶುಭವನ್ನು ಹಾರೈಸುತ್ತದೆ.

---

## ನುಡಿ ಮುತ್ತು

ಶಾಸ್ತ್ರಗಳನ್ನೆಲ್ಲಾ ಓದಿದ ಮಾತ್ರಕ್ಕೆ ವಿದ್ವಾಂಸನಾಗುವುದಿಲ್ಲ. ಯಾವನು ಕ್ರಿಯಾಶೀಲನೋ ಅತನೇ ವಿದ್ವಾಂಸ.

# ಪ್ರಕೃತಿಯ ಮಡಿಲಿನಿಂದ ಹೂವಾಗಿ ಅರಳುವ ಕಲೆ

ಪ್ರಕೃತಿಯೊಂದಿಗೆ ಮರೆತು ಇತಿಹಾಸವಾಗಲಿರುವ ಕಲೆಗಳು, ಪ್ರಕೃತಿಯಿಂದ ಮಾನವ ಬದುಕಿದರೆ ಹೊರತು ಮಾನವನಿಂದ ಪ್ರಕೃತಿಯಲ್ಲ.

**ಪ್ರಕೃತಿಯಿಂದ ಪಡೆಯುವ ಈ ಉಪಯೋಗಗಳು :**

**ಮರದಿಂದ :** ನೇಗಿಲು, ನೊಗ, ತಾಯಮರ, ದನದ ಕುತ್ತಿಗೆಗೆ ಮೆಂಟೆ, ಕುಂಟೆ, ಬತ್ತ ಕುಟ್ಟಲು ಒಣಕೆ, ರಾಟೆ, ಅವಲಕ್ಕಿ ಕುಟ್ಟಲು ಒರಳು, ಮನೆ ಕಟ್ಟಲು, ಬಾಗಿಲು, ಕಿಟಕಿ, ಉಳಿ, ಬಾಜು, ಮಚ್ಚು, ಕತ್ತಿ, ಗುದ್ದಲಿ, ಪಿಕಾಸಿಗಳಿಗೆ ಹಿಡಿ ಇತ್ಯಾದಿಗಳು ಒಂದೆ ಎರಡೆ. ಮೇಜು ಕುರ್ಚಿ ಕಟ್ಲ್ ಪೀಠೋಪಕರಣಗಳು, ಮಣೆ, ಮುಕ್ಕಾಲು ಹೀಗೆ ಬಗೆಬಗೆಯವು.

ಕಾಡಿನಿಂದ ಬೆತ್ತ, ಬೆತ್ತದಲ್ಲಿ ದಪ್ಪ ಬೆತ್ತ, ಹಾಲುಬೆತ್ತ, ಕಿರು ಬೆತ್ತ, ನಾಗ ಬೆತ್ತ, ಹಂದಿ ಬೆತ್ತಗಳು. ಬೆತ್ತದಿಂದ ಬತ್ತ ಕಟ್ಟುವ ಕಡಿಕೆ, ಕುರ್ಚಿ, ಮೇಜು, ಸ್ಟೂಲು, ಕುಕ್ಕೆ, ಮೊರ, ಚೀಲ, ಪೆಟ್ಟಗೆ, ಕುತ್ತು ಪೆಟ್ಟಗೆ, ಯಾಲಕ್ಕಿಪಚ್ಚೆ, ಉಯ್ಯಾಲೆ ಹಗ್ಗ, ಬುಟ್ಟಿ ಕೂಂಟಗೆ, ಮಕ್ಕಳಿಗೆ ಪಾಠ ಕಲಿಸುವಾಗ ಉಪಯೋಗಿಸುವ ಬೆತ್ತ ಕೋಲು, ಅಜ್ಜಂದಿರಿಗೆ ದೊಣ್ಣೆ, ಆವೇಶ ಭರಿತವನಿಗೆ ಸೇವೆ ಕೋಲು, ಅನ್ನ ಬಸಿಯಲು ಚಿಬ್ಬಲು, ಪಚ್ಚೆ ಹೀಗೆ ಹಲವಾರು.

**ಬೈತಡ್ಕ ಜಾನಕಿ ಬೆಳ್ಯಪ್ಪ,**
ಸಂಚಾಲಕಿ, ಗೌಡ ಮಹಿಳಾ ಒಕ್ಕೂಟ ಕೊಡಗು, ಮಡಿಕೇರಿ

**ವಾಟೆಯಲ್ಲಿ ಹಲವು ವಿಧಗಳು :** ಕಲ್ಲುವಾಟೆ, ಮಲೆ ವಾಟೆ, ಹೊಳೆವಾಟೆ, ಸಣ್ಣವಾಟೆ, ತೂಂಬ್‌ವಾಟೆ. ವಾಟೆಯಿಂದ ಸೂಂತ್ರಿ, ಕೊಳಲು, ದೊಂದಿ, ಪಾತಿ, ಕಡಿಕೆ, ಮೊರ ಪಚ್ಚೆ, ಕುಕ್ಕೆ, ಮನೆ ಕಟ್ಟಲು, ಗೊರ್ಗುರ್, ಕೂಂಟಗೆ, ವನಲೆ, ವಾಲೆಪಚ್ಚೆ, ಹುತ್ತರಿಪಚ್ಚೆ, ಮೀನ್ ಹಿಡಿಯಲು ಪೊಡ, [ಕೂಳಿ] ಗೋರಿ ಇವುಗಳು.

**ನೊಜ :** ಗದ್ದೆ ಏರಿಗಳಲ್ಲಿ, ಗದ್ದೆ ಬದಿಯಲ್ಲಿ ಹುಲುಸಾಗಿ ಬೆಳೆಯುತ್ತದೆ. ಕಪ್ಪೆ ಹುಲ್ಲು ಸಹ ಅಷ್ಟೆ. ಬಿಳಿಹೂ ತುದಿಯಲ್ಲಿದ್ದು ಗದ್ದೆ ಬದಿಗಳಲ್ಲಿ ಬೆಳೆಯುತ್ತದೆ. ಇವುಗಳಿಂದ ಚಾಪೆ, ಕಾಲು ಚಾಪೆ, ಸಿಂಬೆ, ತೂಗುವ ನೆಲು, ಹಗ್ಗ. **ಸಿಂಬೆ :** ಹುಲ್ಲಿನಿಂದ ಒಣಗಿದ ಬಾಳೆಯ ಎಲೆಗಳಿಂದ, ಹಸಿ ಎಲೆಗಳಿಂದ ಗೊಬ್ಬರ ಹೊರುವುದಕ್ಕೆ ಹುಲ್ಲಿನಿಂದಲೂ ಸೌದೆ ಹೊರುವುದಕ್ಕೆ ಒಣಗಿದ ಬಾಳೆಯ ದರ್ಗ್‌ನಿಂದಲೂ ನೀರು ಹೊರುವುದಕ್ಕೆ ಕಪ್ಪೆ ಹುಲ್ಲಿನಿಂದಲೂ, ಬಾಳೆಯ ದಿಂಡಿನಿಂದ ಒಣಗಿದ ಕಪ್ಪು ಬಿಳುಪು ಹಾಳೆಗಳ ಪಟ್ಟೆ ಪಟ್ಟೆಯಾಗಿ ಸುಂದರವಾಗಿ ನೆಯ್ಯುವುದು. ಮದುಮಗಳು ನೀರು ತರುವುದಕ್ಕೆ ಮಣೆಯಿಂದ ಸಿಂಬೆ ತಯಾರಿಸುವರು. ಜೋಗಿ [ಸಿದ್ಧವೇಷ] ಕಟ್ಟಲು ಸಹ ಬಾಳೆಯ ದರ್ಗ್ ಬೇಕು.

**ನಾರುಗಳು :** ನಾರುಗಳಲ್ಲಿ ಹಲವಾರು, ರಕ್ಕಸಿನಾರು, [ಬೂತಾಳೆ ನಾರು] ಇತ್ಯಾದಿ. ಇವುಗಳಿಂದ ಕೈಚೀಲ, ಹುರಿಹಗ್ಗ ಬತ್ತ ಬೆಳೆಯನ್ನು ಮನೆಗೆ ತರುವುದಕ್ಕೆ ಹೊರೆಕಟ್ಟಲು, ಗಡ್ಡ ಮೀಸೆಗಳ ಉಪಯೋಗಕ್ಕೆ ಬೇಕು. ಪಡ್ತಿ ಮರದಿಂದ ಹುತ್ತರಿ ಹಬ್ಬದಲ್ಲಿ ನೆರೆಕಟ್ಟಲು ನೆರೆಹಗ್ಗ ಬೇಕು. ಬೀಣೆಯಾಗಿ ಸಹ ಉಪಯೋಗವಾಗುತ್ತದೆ. ●

## ಮಡಿಕೇರಿಲಿ 2ನೇ ವರ್ಷದ ಹುತ್ತರಿಹಬ್ಬ ಆಚರಣೆ

ತಾರೀಖ್ 3–12–1998ರ ಬುದ್‌ವಾರ ಮಡಿಕೇರಿಲಿರೊ ಗೌಡ ವಿದ್ಯಾ ಸಂಘದ ಕಟ್ಟಡಲಿ "ಕೊಡಗ್ ಗೌಡ ಸಾಂಸ್ಕೃತಿಕ ಅಕಾಡಮಿ"ಯವು 2ನೇ ವರ್ಷದ ಹುತ್ತರಿ ಹಬ್ಬನ ಗೌಜ್‌ಲಿ ಆಚರಿಸ್ತೊಳೊಂತ ತಿಳ್ದ್ ಬಂದ್‌ಟ್ಟು. ಅಂದ್ ರಾತ್ರಿ 8 ಗಂಟೆಗೆ ನೆರೆಕಟ್ಟುದು ಆದ್ರೆ 9 ಗಂಟೆಗೆ ಕದ್‌ರ್ ತೆಗ್ಯದು ಹಂಗಾಗಿ ಮಡಿಕೇರಿಲಿರೊ ಪ್ರತಿ ಮನೆವು ತಪ್ಪದೆ ಬಂದ್ ಸಹಕರಿಸಕುಂತೇಳಿ ಅಕಾಡೆಮಿ ಕಾರ್ಯದರ್ಶಿ ಕೋಡಿ ಚಂದ್ರಶೇಖರ್ ವಿನಂತಿಸ್ಯೊಳೊ.

## 3–12–1998ಕ್ಕೆ ಕೊಡಗಿನ ಹುತ್ತರಿಹಬ್ಬ

ಕೊಡಗಿನ ಆರಾಧ್ಯ ದೈವರಲ್ಲಿ ಒಬ್ಬರಾದ ಪಾಡಿ ಶ್ರೀ ಇಗ್ಗುತಪ್ಪ ದೇವಾಲಯದಲ್ಲಿ ಡಿಸೆಂಬರ್ ತಿಂಗಳ 3ನೇ ದಿನಾಂಕದಂದು ರಾತ್ರಿ ರೋಹಿಣಿ ನಕ್ಷತ್ರದಲ್ಲಿ ಹುತ್ತರಿ ಹಬ್ಬ ಜರುಗಲಿದೆ. ರಾತ್ರಿ 8 ಗಂಟೆಗೆ ನೆರೆ ಕಟ್ಟುವುದು, ರಾತ್ರಿ ಒಂಬತ್ತಕ್ಕೆ ಕದಿರು ತೆಗೆಯುವುದು. ಹತ್ತು ಗಂಟೆಗೆ ಹೊಸ ಅಕ್ಕಿಯ ಊಟ ಮಾಡಲು ಶುಭ ಸಮಯವಾಗಿರುತ್ತದೆ ಎಂದು ತಿಳಿದುಬಂದಿದೆ.

## ನಗೆಹನಿ

ಹೆಂಡತಿ : 'ನಿಜ ಹೇಳಿ, ನಿಮ್ಮ ತಲೇಲಿ ಇಷ್ಟೊಂದು ಹೇನುಗಳು ಹೇಗೆ ಬಂದವು?'

ಗಂಡ : ಹೊಡೀಬೇಡ್ರೆ ಹೇಳ್ತಿನಿ, ಹೆಂಗಸರ ಪೊಲೀಸ್ ಸ್ಟೇಷನ್ ಲಾಕಪ್ಪಿನಲ್ಲಿ ಒಂದು ದಿನ ಕೂಡಿಹಾಕಿದ್ರು!

# ಪ್ರಾರ್ಥನೆಯನ್ನು ವಿರೋಧಿಸಿದ್ದು ಸರಿಯೋ ? ತಪ್ಪೋ ?

ಮಡಿಕೇರಿಯ ಪುರಸಭೆಯ ಮಾಸಿಕ ಸಭೆಯಲ್ಲಿ ಕೊಡವ ಭಾಷೆಯಲ್ಲಿ ಮಾಡಿದ ಪ್ರಾರ್ಥನೆಯನ್ನು ವಿರೋಧಿಸಿದ ನಮ್ಮವರೇ ಆದ ಬಿಟ್ಟೀರ ರಾಮಯ್ಯನವರು ಮಾಡಿದ್ದು ಸರಿಯೋ ? ತಪ್ಪೋ ? ಎಂದು ಎಲ್ಲರನ್ನು ಕಾಡುತ್ತಿದೆ. ಕೆಲವು ಕೊಡವ ಸಮಾಜ, ಸಂಘ–ಸಂಸ್ಥೆಗಳು ಇದನ್ನು ಖಂಡಿಸಿವೆ ಆದರೆ ನಮ್ಮ ಗೌಡ ಜನಾಂಗದವರು ಇವರ ವಿರೋಧ ಅಥವಾ ಪರವಾಗಿಯೂ ಹೇಳಿಕೆ ನೀಡಿರುವುದಿಲ್ಲ. ವಿರೋಧವಾಗಿ ಹೇಳಿಕೆ

ತಡಿಯಪ್ಪನ ಕುಮಾರಜಯ, ಮೈಸೂರು

ಕೊಡುವ ಅವಶ್ಯಕತೆಯೂ ಇಲ್ಲ. ಕಾರಣ ಇಂದಿನ ಕ್ಲಿಷ್ಟ ಪರಿಸ್ಥಿತಿಯಲ್ಲಿ ಕೆ. ಆರ್. ಎಂ. ಎಂ. ಡೆಲ್ಲಿ ಚಲೋ ಕಾರ್ಯ ಕ್ರಮ ಹಮ್ಮಿಕೊಂಡಿರುವ ಬೆನ್ನ ಹಿಂದೆಯೇ ಇಲ್ಲಿ ನಡೆದ ಕೊಡವ ಭಾಷೆಯ ಪ್ರಥಮ ಪ್ರಾರ್ಥನೆ ಸರಿಯಲ್ಲವೆಂದು ನನಗನ್ನಿಸುತ್ತದೆ. ಅಲ್ಲದೆ ರಾಮಯ್ಯನವರಿಗೆ ನನ್ನ ವೈಯಕ್ತಿಕ ಬೆಂಬಲ ಇದೆ. ಒಂದು ವೇಳೆ ಮುಂದಿನ ಸಭೆಗಳಲ್ಲಿ ಅರೆಭಾಷೆ ಯಲ್ಲಿಯೂ ಪ್ರಾರ್ಥನೆ ನಡೆಯಬೇಕು. ಇದಕ್ಕೆ ಆಸ್ಪದವಿದ್ದರೆ ಬೆಂಬಲಿಸಿ ಹೇಳಿಕೆ ಕೊಟ್ಟಿದ್ದನ್ನು ಹಿಂದಕ್ಕೆ ಪಡೆಯುತ್ತೇನೆ. ಇಲ್ಲದಿದ್ದಲ್ಲಿ ರಾಮಯ್ಯನವರು ವಿರೋಧಿಸಿದ್ದು ಸರಿಯೆಂದು ನನ್ನ ಸಂಪೂರ್ಣ ಬೆಂಬಲ ನೀಡುತ್ತೇನೆ.

**ಪ್ರಶಂಸಾರ್ಹರು :** ನವಂಬರ್ 23ರಂದು ಸೋಮವಾರ ಪೇಟೆಯಲ್ಲಿ ನಡೆದ ಪ್ರಜಾವೇದಿಕೆಯ ಅದ್ಧೂರಿ ಸಭೆಗೆ ಜನ ರನ್ನು ಕೂಡಿಸುವ ನೇತೃತ್ವವನ್ನು ಹೊತ್ತ ಕೆ. ಕೆ. ಪೂರ್ಣಯ್ಯ, ಕುಶಾಲಪ್ಪ, ಎಂ. ಟಿ. ದಾಮೋದರ, ಎಂ. ಟಿ. ವಿಜಯೇಂದ್ರ ಹಾಗೂ ಇನ್ನಿತರರಿಗೂ ನನ್ನ ಧನ್ಯವಾದಗಳು.

**ಜನಾಂಗದ ನಾಯಕ ದೇವಿಪ್ರಸಾದ್‌ಗೆ ಬೆಂಬಲ :** ಕೊಡಗಿನ ಒಂದೇ ಜನಾಂಗದ ಹಿತ ಬಯಸಿರುವ ಕೆ.ಆರ್.ಎಂ.ಎಂ.ನ ವಿರುದ್ಧ ಸೆಟೆದು ನಿಂತು ಪ್ರಜಾವೇದಿಕೆಯನ್ನು ಹುಟ್ಟುಹಾಕಿ ಕೊಡಗಿನ ಎಲ್ಲಾ ಜನರನ್ನು ಒಂದುಗೂಡಿಸಿ ಕೊಡಗಿನ ಹಿತ ಕೋಸ್ಕರ ಹೋರಾಡುವ ಪ್ರಾಮಾಣಿಕ ವ್ಯಕ್ತಿಗಳೆಂದರೆ ಎನ್. ಎಸ್.ದೇವಿಪ್ರಸಾದ್ ಮತ್ತು ಸಂಗಡಿಗರು. ಹಗಲು ರಾತ್ರಿ ಯೆನ್ನದೆ ನಿರಂತರ ಹೋರಾಟ ಮಾಡುತ್ತಿರುವ ಇವರಿಗೆ ಎಲ್ಲಾ ವರ್ಗದ ಜನಾಂಗವು ಬೆಂಬಲ ನೀಡಬೇಕಾದುದು ಅನಿವಾರ್ಯ ವಾಗಿದೆ

**ವಿಷಾದ :** ಕೊಡಗಿನ ಇಂದಿನ ವಿದ್ಯಮಾನವನ್ನು ಮುದ್ರಿಸುತ್ತಿರುವ ಕೆಲವು ಪತ್ರಿಕಾ ಮಾಧ್ಯಮಗಳು ಪ್ರಜಾ ವೇದಿಕೆಯ ಹಾಗೂ ಗೌಡ ಜನಾಂಗದ ಯಾವುದೇ ಕಾರ್ಯ ಕ್ರಮಗಳಿಗೆ ಸಾಕಷ್ಟು ಪ್ರಚಾರ ಕೊಡುತ್ತಿಲ್ಲವೆಂದು ಅನಿಸುತ್ತದೆ. ಇದು ಖಂಡನೀಯವಾಗಿದೆ. ಇಂತಹ ಪತ್ರಿಕೆಗಳನ್ನು ಓದುವು ದರಲ್ಲಿ ಅರ್ಥವಿಲ್ಲವೆಂದು ಜನಾಂಗ ಈ ಬಗ್ಗೆ ಚಿಂತಿಸುವಂತಾಗ ಬೇಕಾದ್ದು ಅನಿವಾರ್ಯ ಎನಿಸುತ್ತಿದೆ. ●

## ಬ್ರಹ್ಮಗಿರಿ

ಎಂತ ಚೆಲುವ ನೋಟವಯ ಬ್ರಹ್ಮಗಿರಿ
ಸೃಷ್ಟಿಕರ್ತ ಹೊಯ್ದನಿಲ್ಲಿ ಚೆಲುವಿನ ಸಿರಿ
ಅತ್ತ ಇತ್ತ ನೋಡಿದರೆ ಗಿರಿಗಳ ಗರಿ
ಇಲ್ಲಿ ಕಾಣ್ವ ನೋಟಕಿನ್ನು ಯಾವುದು ಸರಿ.

ಸುತ್ತ ಮುತ್ತ ಹಸುರಾಗಿ ಹೊಮ್ಮುತಲಿದೆ
ಮನದೊಳಗೆ ಹೊಸತು ಭಾವ ಚಿಮ್ಮುತಲಿದೆ.
ಕಡು ತಿಳಿ ಹಸುರುಗಳ ಸಂತೆಯಿಲ್ಲಿದೆ
ಇದನು ಕಂಡು ಯಾರ ಎಡೆ ಹಿಗ್ಗದುಳಿದಿದೆ.

ಗಿರಿಮೇಲೆ ಗಿರಿನಿಂತು ಮೆರೆಯುತಲಿದೆ
ವಾಗ್ದೇವಿ ಕೆಳಗಿಳಿದು ಇಣುಕುತಲಿದೆ.
ತಂಪು ಸೊಂಪಿನ ಗಾಳಿ ಬೀಸುತಲಿದೆ
ಗಿಡ ಮರ ಹೂಬಳ್ಳಿ ಆಡುತಲಿವೆ

ಹಕ್ಕಿಗಳು ಗಿರಿಯ ಚೆಲುವ ಹಾಡುತಿವೆ
ಅಕ್ಕ ಪಕ್ಕ ರೆಕ್ಕೆ ಬಡಿದು ಹಾರುತಿವೆ.
ದುಂಬಿಗಳು ಸುತ್ತಿ ಮಧು ಹೀರುತಿವೆ
ಹಿಗ್ಗಿನಿಂದ ಮಧುರನಾದ ಗೈಯ್ಯುತಿವೆ.

ಹೂಬಳ್ಳಿ ಹೂ ತುಂಬಿ ನಗುತಲಿವೆ
ಸುತ್ತ ಮುತ್ತ ಬಳಸಿ ನಿಂತು ಬಳುಕುತಿವೆ.
ಕಂಪನೆಲ್ಲ ಗಾಳಿ ಹೀರಿ ಹರಡುತ್ತಿದೆ
ನೋಡುವಂಗೆ ಚೆಲುವಿನೂಟ ಉಣಿಸುತ್ತಿದೆ.

ಋಷಿಗಳು ಮೆಚ್ಚಿದ ನೆಲೆ ಪಾವನವಿಲ್ಲಿ
ಅಗಸ್ತ್ಯರು ತಪಗೈಯ್ದರಂತೆ ಇಲ್ಲಿ.
ಕಾವೇರಮ್ಮ ಅನ್ನಪೂರ್ಣೆ ಜನಿಸಿಹಳಿಲ್ಲಿ
ಭಕ್ತ ಜನರ ಪಾಪವನ್ನು ತೊಳೆವಳಿಲ್ಲಿ.

—ಕುಯಿಂತೋಡು ದಾಮೋದರ, ಸಂಪಾಜೆ

# ನಿಮ್ಮ ಪತ್ರಗಳು

## ಗೌಡ ಬಾಂಧವರಲ್ಲಿ ನನ್ನದೊಂದು ವಿನಂತಿ

ಮಾನ್ಯರೆ,

ಈ ಹಿಂದೆ ಶ್ರೀ ಪೂಜಾರಿ ಮೊಣ್ಣಪ್ಪನವರು 'ಕೊಡಗು ಸಂಗಾತಿ' ಪತ್ರಿಕೆಯಲ್ಲಿ ದಿ॥ ನಿಡ್ಯಮಲೆ ಮುದ್ದಪ್ಪನವರ ಸ್ಮಾರಕ ಪ್ರತಿಮೆಯೊಂದನ್ನು ನಿರ್ಮಿಸುವ ವಿಷಯವನ್ನು ಬಹಳ ಕಳಕಳಿಯಿಂದ ಕೇಳಿಕೊಂಡಿದ್ದರು. ಇದನ್ನು ನೀವೆಲ್ಲರು ಓದಿರಬಹುದು.

1837ನೇ ಇಸವಿಯಲ್ಲಿ ದಿ॥ ಗುಡ್ಡೆಮನೆ ಅಪ್ಪಯ್ಯ ಗೌಡರು ಮತ್ತು ಇನ್ನಿತರ 13 ಜನ ವೀರ ಸಹಚರರು ಅಪ್ಪಯ್ಯಗೌಡರ ನೇತೃತ್ವದಲ್ಲಿ ಕೊಡಗಿನ ಸ್ವಾಭಿಮಾನಕ್ಕಾಗಿ ಬ್ರಿಟಿಷ್ ಚಕ್ರಾಧಿಪತ್ಯದ ವಿರುದ್ಧ ಕೊಡಗಿನ ಕಡೇ ರಾಜ ಚಿಕ್ಕ ವೀರರಾಜೇಂದ್ರನ ಪರವಾಗಿ ಆಂಗ್ಲರ ಒಡೆದು ಆಳುವ ನೀತಿಯ ವಿರುದ್ಧ ಕೆಚ್ಚೆದೆಯಿಂದ ಹೋರಾಡಿ ಅವರ ಅವಿಶ್ವಾಸಕ್ಕೆ ಪಾತ್ರರಾಗಬೇಕಾಯಿತು. ಅದೇ ಸಮಯದಲ್ಲಿ ಕೊಡಗಿನ ಕೆಲವು ಬಲಾಢ್ಯರು ಈ ಸದವಕಾಶವನ್ನು ಬಹು ನಾಜೂಕಾಗಿ ಉಪಯೋಗಿಸಿಕೊಂಡರು. ಬ್ರಿಟೀಷರ ಪ್ರೀತಿ, ವಿಶ್ವಾಸ, ಆದರಾತಿಥ್ಯಕ್ಕೆ ಮಾರುಹೋಗಿ ಆಸ್ತಿ ಪಾಸ್ತಿಯನ್ನು ಮಾಡಿಕೊಂಡು ಆರ್ಥಿಕ ಸ್ಥಿತಿಯಲ್ಲೂ, ವಿದ್ಯೆಯಲ್ಲೂ, ಸರಕಾರದ ಮೇಲ್ಪಟ್ಟ ಹುದ್ದೆಯಲ್ಲೂ ಅವರ ಗುಲಾಮರಾಗಿ ಮುಂದುವರಿದರು ಇವೆಲ್ಲದರಿಂದಲೂ ವಂಚಿತರಾಗಿ ನಮ್ಮವರು ಬಹಳ ಹಿಂದುಳಿಯುವಂತಾಯ್ತು. ನಮ್ಮವರು ಕೇವಲ ಬೆರಳೆಣಿಕೆಯಷ್ಟು ಜನ ಮಾತ್ರ ಅತಿ ಚಿಕ್ಕ ಪುಟ್ಟ ಹುದ್ದೆಯಲ್ಲಿದ್ದರು.

ನಂತರ ಕೆಲವು ಬಲಾಢ್ಯ ಜನರಿಂದ ಗೌಡರ ಮೇಲೆ ದಕ್ಷಿಣ ಕನ್ನಡ ಜಿಲ್ಲೆಯಿಂದ ಬಂದ ತುಳುವರೆಂಬ ದಬ್ಬಾಳಿಕೆಯನ್ನು ಹೇರಿ, ತುಚ್ಛ ಹೀನ ರೀತಿಯಲ್ಲಿ ಕಂಡ ರೀತಿ ಅಮಾನುಷವಾದದು. ಈ ರೀತಿಯ ಪರಿಸ್ಥಿತಿಯು 1940ರ ಹಿಂದಿದ್ದು ಆ ಸಮಯದಲ್ಲಿ ವಿದ್ಯಾರ್ಥಿಯಾಗಿ ಇಂದಿಗೂ ಜೀವಂತವಾಗಿದ್ದರೆ ಅವರಿಗೆ ತಿಳಿಯಬಹುದು. ಇದನ್ನೆಲ್ಲ ಸಹಿಸದ ಮುದ್ದಪ್ಪನವರು ತಮ್ಮ ಜನಾಂಗವನ್ನು ವಿದ್ಯೆಯಲ್ಲಿ ಹೇಗಾದರು ಮುಂದುವರಿಸಿ, ಜ್ಞಾನೋದಯಭರಿಸಿ, ಆ ಬಲಿಷ್ಠರಂತೆಯೇ ನಮ್ಮ ಮುಂದಿನ ಯುವ ಪೀಳಿಗೆಯವರನ್ನು ಪ್ರಚೋದಿಸಿ ಬೆಳೆಯಬೇಕೆಂದು ಹಂಬಲಿಸಿ, ರೊಚ್ಚಿಗೆದ್ದು ಅವರೊಡನೆ ಎದೆಗುಂದದೆ ಎದುರು ನಿಂತು ಹೋರಾಡಿದ ವೀರರು ಹೌದು, ಧೀರರು ಹೌದು. ಈ ಬಗ್ಗೆ 1997ರಲ್ಲಿ ಅವರ ಜನ್ಮ ಶತಾಬ್ದಿ ಸಂದರ್ಭದಲ್ಲಿ ಕೊಡಗು ಮತ್ತು ದ. ಕ. ಜಿಲ್ಲಾ ಗೌಡ ಸಮಾಜ ಬೆಂಗಳೂರು ಇವರು ಸ್ಮರಣ ಸಂಚಿಕೆಯೊಂದನ್ನು ಹೊರ ತಂದಿರುವುದು ಶ್ಲಾಘನೀಯವಾಗಿದೆ. ಈ ನಿಟ್ಟಿನಲ್ಲಿ 'ಕೊಡಗು ಸಂಗಾತಿ' ಪಾಕ್ಷಿಕವು ಸಹ ಅವರ ಜೀವನ ಚರಿತ್ರೆಯನ್ನು ಹಂತ ಹಂತವಾಗಿ ಪ್ರಕಟಿಸಿ ಜನಾಂಗದವರಿಗೆ ಇವರ ಬಗ್ಗೆ ಹೆಚ್ಚಿನ ಅರಿವು ಮೂಡಿಸುವಲ್ಲಿ ಸಫಲವಾಗಿರುವುದು ಸಂತೋಷದ ಬೆಳವಣಿಗೆಯಾಗಿದೆ.

ಆದ್ದರಿಂದ ಇಂತಹ ವೀರ ಧೀರರನ್ನು ತಲೆ ತಲಾಂತರಕ್ಕೂ ಯುವಪೀಳಿಗೆಯು ನೆನೆಪಿಸಿಕೊಳ್ಳುವುದಕ್ಕೋಸ್ಕರವಾಗಿ ಕೊಡಗಿನ ಎಲ್ಲಾ ಗೌಡ ಸಮಾಜಗಳು, ಗೌಡ ವಿದ್ಯಾ ಸಂಘ ಸಂಸ್ಥೆಗಳು, ಮಹಿಳಾ ಒಕ್ಕೂಟಗಳು, ಗೌಡ ಸಾಂಸ್ಕೃತಿಕ ಅಕಾಡೆಮಿಯು ಹಾಗೂ ಇನ್ನಿತರ ಎಲ್ಲಾ ಸಂಘ ಸಂಸ್ಥೆ ಒಕ್ಕೂಟಗಳೆಲ್ಲವು ಜೊತೆಸೇರಿ ಮಡಿಕೇರಿಯ ನಮ್ಮ ಮೇಲಿನ ವಿದ್ಯಾ ಸಂಘದ ಅಂಕಣದಲ್ಲಿ ಸುಂದರವಾಗಿ ಎದ್ದು ಕಾಣುವಂತೆ ಗೌಡ ಕೇಸರಿ ದಿ॥ ನಿಡ್ಯಮಲೆ ಮುದ್ದಪ್ಪನವರ ಶಿಲಾ ಪ್ರತಿಮೆಯನ್ನು ನಿರ್ಮಿಸುವಂತೆ ವಿನಂತಿಸುತ್ತಾ ಅಲ್ಲಿಗೆ ಕುಲಗುರು ವೆಂಕಟರಮಣನ ಅಭಯ ಹಸ್ತವಿರಲೆಂಬುದಾಗಿ ಸಹ ಜನಾಂಗದ ಪರವಾಗಿ ವಿನಂತಿಸುತ್ತಿದ್ದೇನೆ.

—ನಂಗಾರು ಅಪ್ಪಾಜಿ, ಬೆಂಗಳೂರು.

ವಿ. ಸೂ. : 1997ರ ಸಪ್ಟೆಂಬರ್ ತಿಂಗಳಲ್ಲಿ ಕೊಡಗು ಗೌಡ ವಿದ್ಯಾ ಸಂಘವು, ಗೌಡ ಸಮಾಜವು ಹಾಗೂ ಹಿರಿಯರ ಸಮ್ಮುಖದಲ್ಲಿ ಸಭೆಯೊಂದು ನಡೆಯಿಸಿತು. ಅಂದು ತೆಗೆದು ಕೊಂಡ ತೀರ್ಮಾನವು ದಿ॥ ಮುದ್ದಪ್ಪನವರ ಜನ್ಮಶತಾಬ್ದಿಯನ್ನು ಮಡಿಕೇರಿಯಲ್ಲಿ 1997ರ ಡಿಸೆಂಬರ್ ಒಳಗೆ ಅದ್ದೂರಿಯಾಗಿ ಆಚರಿಸುವಂತೆ ದಿ॥ ಪಾಂಡನ ಸುಬ್ಬಯ್ಯನವರ ಸಮಕ್ಷಮದಲ್ಲಿ ತೀರ್ಮಾನಿಸಿತು. ಅದು ಸಹ ಅವರ ಕೊನೆಯಾಸೆಯಾಗಿಯೇ ಉಳಿದಿದೆ.

ಜನಾಂಗಕ್ಕಾಗಿ ತನ್ನನ್ನೇ ಅರ್ಪಿಸಿಕೊಂಡು ಗೌಡ ಕೇಸರಿಯೆಂಬ ಹೆಗ್ಗಳಿಕೆಗೆ ಪಾತ್ರರಾದ ಶ್ರೀಯುತರ ಶಿಲಾಮೂರ್ತಿಯನ್ನು ಸ್ಥಾಪಿಸಿ ನೆನೆಯುವುದು ಯುವ ಪೀಳಿಗೆಯ ಕರ್ತವ್ಯವೂ ಹೌದು, ಧರ್ಮವು ಹೌದಾಗಿರುವಾಗ ಇನ್ನು ಶೀಘ್ರದಲ್ಲಿಯೇ ಅವರನ್ನು ಮರೆತು ಇತಿಹಾಸವಾಗಲಿರುವುದು ನಿಜಕ್ಕೂ ಖೇದಕರ ಸಂಗತಿಯಾಗಿದೆ. ಜನಾಂಗ ಇನ್ನಾದರೂ ಎಚ್ಚೆತ್ತುಕೊಳ್ಳುವರೇ ?

---

### ಸೂಕ್ತಿ

ಸಂಪತ್ತು ಬರುವಾಗ ನಮಗೆ ತಿಳಿಯದೇ ಬಂದು ಸೇರುತ್ತದೆ : ಹೋಗುವಾಗ ಸಂಪೂರ್ಣ ನಾಶವಾಗುತ್ತದೆ.

**ಅರೆ ಭಾಷಿಕ ವಿಭಾಗ**

**ಧಾರವಾಹಿ-16**

**ಮೂಲಕಥೆ : ಅಶ್ವಥಿ ಅರವಿಂದ್**

**ಅರೆಭಾಷೆಗೆ : ಎಂ.ಇ. ಮುಹಮ್ಮದ್**

# ಕರಿ ಚಿನ್ನ

ಅಜ್ಜ ಕೊಟ್ಟ ಬಿಸ್ಕಟ್‌ನ ನೋಡ್ದು ರಜನಿ ಹೇಳ್ತ್.

'ಏ...ಇದ್ ತೌಡ್ ಬಿಸ್ಕಟ್ ಅಲ್ಲರಾ ಗೆಣ್ಸನ ಹೊಡಿದ್

ಅವ್ಳು ಆ ಪ್ಯಾಕೆಟ್‌ನ ಮಾದಪ್ಪನ ಕೈಗೆ ಕೊಟ್ಟತ್.

ಪುನಃ ಆ ಮಕ್ಳ ಆಟಲಿ ಮುಳ್‌ಗಿದೋ.

'ಅಯ್ಯೋ ಅಪ್ಪ ಯಾಗ ಬಂದದ್, ನಾನ್ ನೋಡ್ತೇಲೆ. ಈ ಮಕ್ಳ ಇಲ್ಲೆ ಆಡ್ತಾ ಇದ್ರೂ ಹೇಳ್‌ತ್ಲೆಲ್ಲಾ.'

ತಾರ ಹೇಳಿಕಂಡೇ ಒಳಗಿಂದ ಬಾತ್.

'ನೀನ್ ಬಂದ್ ತುಂಬ ಹೊತ್ತಾತ ಅಪ್ಪಾ ?'

ಅವಳು ಅಪ್ಪನ ಕಾಲ್ ಹಿಡ್‌ದ್ ಕೇಳ್ತ್. ಅವಳ ಎರಡ್ ಕೈಲಿ ಇದ್ದ ಚಿನ್ನದ ಬಳೆ ನೋಡಿ ಮಾದಪ್ಪಂಗೆ ಕುಸಿ ಆತ್.

'ವೀರಾ, ಗೌರ ಎಲ್ಲ ಹೆಂಗೊಳೊ ಅಪ್ಪಾ ? ಎಸ್ಟ್ ದಿನ ಆತ್ ನಿಮ್ಮನ್ನೆಲ್ಲ ನೋಡಿ'

ತಾರಾ ಕುತೂಹಲಲಿ ಕೇಳ್ತ್.

'ಗೌರಂಗೆ ಬೇಗ ಮೊದ್ವೆ ಉಟ್ಟವ್ವ. ಹತ್ರದ ನೆಂಟಸ್ಥಿಕೆ. ಬೋರ್‌ಗುಡ್ಡೆ ದೇವಯ್ಯನ ಮಜ ರಂಜನ್. ಆತುರಾತುರಲಿ ಮಾಡ್ದ ತೀರ್ಮಾನ. ಆದರ್‌ಂದ ನಿಂಗೆ ಮೊದ್ಲೆ ತಿಳ್ಸಿಕೆ ಆತ್ಲೆ'

ಮಾದಪ್ಪ ಬೇಜಾರ್‌ಲೇ ಹೇಳ್ತ್.

'ಯಾರ್ ? ಬೋರ್‌ಗುಡ್ಡ ದೇವಯ್ಯ ಅಂಕಲ್‌ದ್ ಮಜ ರಂಜೂ ! ಅವು ದೊಡ್ಡ ಶ್ರೀಮಂತರಲ್ಲ ಅಪ್ಪಾ? ಅವು ಹೆಂಗೆ ಒಪ್ಪಿದೊ ಈ ಮೊದ್ವೆಗೆ. ಡೌರಿ ತುಂಬಾ ಕೇಳ್‌ತ್ಲೆ ?'

'ಡೌರಿ ಏನೂ ಬೇಡಾಂತ ದೇವಯ್ಯ ಹೇಳ್ತ್. ಆದರೆ ಒಂದ್ ಮೂವತ್ತ್ ಸಾವ್ರ ಕೊಡೋಕೂಂತ ನಾನ್ ಅಭಿಪ್ರಾಯ ಮಾಡಿಯೊಳೆ.'

ಒಳೇಂತ ಹೇಳ್ದ್ ನಿಂಗೆ ಗೊತ್ತಿರೊಕಲ್ಲೆ? ನೋಡ್ ನನ್ನ ಕೈಲಿ ಇರೋ ಈ ಚಿನ್ನದ ಬಳೆ ಇದರ್ನ ಬೇರೆ ಜನಕೆ ಕಾಣ್ಲೆಂತ ಹೇಳಿ ನನ್ನ ಗಂಡ ಹಾಕಿದ್. ನಂಗಂತೂ ಇಲ್ಲಿ ದಿನಾ ಬೈಗಳ ತಪ್ಪಿದ್ದೇ ಇಲ್ಲೆ ಅಪ್ಪಾ. ಹೊರಗಿನವುಕೆ ನಮ್ಮ ಗುಟ್ಟ್ ಗೊತ್ತಾದು ಬೇಡಾಂತೇಳಿ ಬ್ಯಾನೆನ ಸಹಿಸ್ಕಂಡ್ ನಾನ್ ನಗುಮೊಕಲಿ ಒಳೆ ಅಷ್ಟೆ ಗೊತ್ತಾ ?'

ತಾರನ ಕಣ್ಣ್‌ಲಿ ನೀರ್ ತುಂಬಿ ಬಾತ್

ಕಳ್ದ ಸಂಚಿಕೆಲಿ... .. ...

ಗಾಳಿಮರ ಚಂಗುಣಿನ ಜೈಲಿಗೆ ನೋಡಿಕೆ ಹೋಕಾನ ಈಗಾದರ್ ನನ್ನ ಗ್ಯಾನ ಬಾತಲ್ಲಾ ಸಾರ್‌ತ ಚಂಗುಮಣಿ ಕೇಳ್ತ್. ನಾನ್ ಬಾರದಿದ್ದರೂ ನಿನ್ನ ಸಂಸಾರನ ಲಾಯ್ಕ ನೋಡಿ ಕಣ್ತಾ ಒಳೆಲ್ಲತ ದೇವಯ್ಯ ಹೇಳ್ತ್. ನನ್ನ ತಂಗೆನ ಮೊದ್ವೆ ಮಾಡಕುತ ಒಂದೇ ಗ್ಯಾನ ಸಾರ್‌ತೇಳ್ತ್. ಅದರ ಬಗ್ಗೆ ನೀನೇನ್ ಹೆದ್ರಬಡ ನಾನ್ 20 ಸಾವ್ರ ಕೊಟ್ಟ್ ಎಲ್ಲಾ ಏರ್ಪಾಡ್ ಮಾಡ್ನೆ ತೇಳ್ದಿ. ಆದ್ರೆ ನಂಗೆ ಒಂದ್ ಉಪಕಾರ ಮಾಡೊಕು. ನೀನ್ ಆ ನಾಡ್‌ಕೊಲ್ಲಿ ಮಾದಪ್ಪನ ಮಗ್ಳು ಗೌರನ ಕೊಲೆ ಮಾಡೊಕುತೇಳ್ದಿ. ಆ ಹಳೇ ಕೊಲೆ ಮಾಡ್ದಕ್ಕೆ ನಂಗೆ ಈ ಶಿಕ್ಷೆ ಆತ್. ಈಗ ಈ ಕೊಲೆ ಮಾಡ್ರೆ ತೇಳ್ಕನ ಈ ಸಲ ನಿಂಗೆ ಅಷ್ಟೊಂದು ಶಿಕ್ಷೆ ಆಗದಂಗೆ ನಾ ನೋಡಿಕಣೆ ತೇಳಿ ಚಂಗುಮಣಿನ ಒಪ್ಪಿಸಿದೆ. ಇತ್ತ ನಾಡ್‌ಕೊಲ್ಲಿ ಮಾದಪ್ಪ ಗೌರನ ಮದುವೆಗೆ ದುಡ್ಡು ಕೇಳಿಕೆ ಮಗ್ಳು ತಾರನ ಮನೆಗೆ ಹೋಕನ ಪಿಳ್ಳೆಕಳಿಗೆತ ಬಿಸ್ಕಟ್ ತಕಣ್ತ್.

ಮುಂದೆ ಓದಿ . ...

'ಅದ್ಕೆ ನಿನ್ನಕ್ಕಲೆ ಅಸ್ಟ್ ಹಣ ಉಟ್ಟಪ್ಪಾ ?'

'ನನ್ನಕ್ಕಲೆ ಇಲ್ಲೆ ನಿಜ, ಆದರೆ ಹಣ ಅಸ್ಟ್ ಮಾಡೊಕನ್ನ. ಒಂದ್ ಏಕರೆ ಜಾಗನ ಮಾರೊಕೂಂತ ಒಳೆ. ನಮ್ಮ ಅರ್ಜೆಂಟ್‌ಗೆ ಮಾರ್‌ದ್ರೆ ಕಮ್ಮಿಗೆ ಕೇಳ್ತ. ಅದರ್‌ಂದ ನಿನ್ನ ಗಂಡಂಗೆ ಹೇಳಿಬುಟ್ಟ ಒಂದ್ ಮೂವತ್ತ್ ಸಾವ್ರ ರೂಪಾಯಿ ಮಾಡಿಕೊಡೊಕು ಜಾಗ ಮಾರ್ದ ಮೇಲೆ ಕೊಟ್ಟನೆ.'

ಮಾದಪ್ಪ ಮಗಳೊಟ್ಟಿಗೆ ಹೇಳ್ತ್

'ಮೂವತ್ತ್ ಸಾವ್ರ !? ದಯಮಾಡಿ ನೀನ್ ಹಣದ ವಿಸ್ಯ ಮಾತ್ರ ಅವರಕ್ಕಲೆ ಕೇಳಿಬುಡ್ಬಡ ನಾನಿಲ್ಲಿ ಎಸ್ಟ್ ಕಷ್ಟಲಿ

'ನೀನ್ ಕಣ್ಣೀರ್ ಹಾಕುದೇನೂ ಬೇಡ ತಾರ. ನಾನ್ ನಿನ್ನಕ್ಕಲೆ ಕೇಳ್ದ್ ಅಷ್ಟೆ. ತಲೆ ಬಿಸಿ ಏನೂ ಮಾಡ್ದು ಬೇಡ'

ಮಾದಪ್ಪ ತನ್ನ ಕಣ್ಣ್‌ನ ಒರ್ಸಿಕಣ್ತ್.

'ನಾನ್ ಹೆತ್ತ ನನ್ನ ಆ ಮಕ್ಳ ಕೂಡ ನನೊಟ್ಟಿಗೆ ಪ್ರೀತಿ ತೋರ್ಸುದುಲೆ ಪಪ್ಪಾ ಗೊತ್ತಾ.'

ಅಸ್ಟರ್ಲಿ ಒಳಗಿದ್ದ ತಾರನ ಅತ್ತೆ ಅಲ್ಲಿಗೆ ಬಾತ್.

'ಓ ಹೋ ಅಪ್ಪ ಬಂದಂಗೆ ಸುರ್ ಮಾಡಿಬುಟ್ಟ ಪಿಸು ಪಿಸು ಮಾತಾಡಿಕೆ?'

'ನನ್ನ ತಂಗೆದ್ ವಿಚಾರ ಕೇಳ್ತಾ ಇದ್ದೆ ಅತ್ತೆ.'

'ತಂಗೆದ್ ಇಚಾರ ಆದ್ರೇನ್, ಅದರ್ನ

ಗುಟ್ಪ್ಲೇ ಕೇಳೊಕಾ ?

'ನಮ್ಮ ಮುಂದೆ ಕೇಳ್ರೆ ಏನಾದೆ ?'

'ನಮ್ಮ ಗೌರಂಗೆ ಒಂದ್ ನೆಂಟಸ್ತಿಕೆ ಬಂದುಟ್ಟ್. ಮುಂದಿನ ಐತ್ವಾರ ಎಂಗೇಜ್ ಮೆಂಟ್. ಅಲ್ಲಿಂದ ಮೂರನೇ ಐತ್ವಾರ ಮೊದ್ವೆ. ನಾನ್ ನಿಮ್ಮನೆಲ್ಲ ಕರಿಯಕೆ ಬಂದೊಳೆ'

ಮಾದಪ್ಪ ಹೇಳ್ತ್.

'ಓ ಮೊದ್ವೆಗೆ ಕರಿಯಕ್ಕಾದ್ರೂ ಒಮ್ಮೆ ಈ ಕಡೆಗೆ ಬಂದ್ರಲ್ಲ. ನಾವ್ ಗ್ಯಾನ ಮಾಡ್ಪೋ ದಾರಿ ಮರ್ತ್ ಹೋತಾ ಏನೋಂತ'

ಮಾಚಮ್ಮ ಹೇಳ್ತ್.

'ಮಗಳ್‌ನ ಕೊಟ್ಟ್ ಮನೆ ದಾರಿ ಮರೆಯುಂವ ಅಲ್ಲ ನಾನ್. ಸೊಲ್ಪ ಕಷ್ಟಲಿ ಇರುದಾರ್‌ಂದ ಬಾಕೆ ಆತ್ಲೆ'

'ಬೇಡ, ಬೇಡ ಕಾರಣ ಒಂದೂ ಹೇಳ್ವದ್ ಬೇಡ. ನನ್ನ ಮಜಂಗೆ ಎಂತೆಂತ ಕಡೆಂದೆಲ್ಲ ಹೆಣ್ಣ್ ಮಾತಾಡ್ದೊ. ಅವಂಗೆ ಅದೃಷ್ಟ ಇಲ್ಲದಕ್ಕೆ ಈಗ ಹೇಳಿ ಏನ್ ಸುಖ'

ಮಾಚಮ್ಮ ಹಂಗ್‌ಸುನಂಗೆ ಮಾತಾಡ್ತ್.

ನೀವೆಲ್ಲ ಎಂಗೇಜ್‌ಮೆಂಟ್‌ಗೆ ಬರೋ ಕೂಂತ ಅವರ್ನ ಕರ್ದ್ ಬುಟ್ಟ್ ಮಾದಪ್ಪ ಅಲ್ಲಿಂದ ಹೊರಟತ್.

'ಇನ್ನ್ ಕಿರಿಯ ಮಗಳ ಮೊದ್ವೆಗೆ ಕರಿಯಕೆ ಇತ್ತ ಬಂದರೆ ಸಾಕ್' ಮಾಚಮ್ಮ ಹೇಳ್ರೂ ಮಾದಪ್ಪ ಏನೂ ಹೇಳದೆ ಬಾತ್.

'ಬರ್ಲಾ ಮೊಗ್ಗು ?'

ತಾರಂಗೆ ಹೇಳ್ತ್.

ತಾರ ಗೇಟ್‌ಗಂಟ್ ಬುಡಿಕೆ ಬಂದ ದೇಂತ ಮಾದಪ್ಪ ಗ್ಯಾನ ಮಾಡಿತ್ತ್. ಅವಳು ಬಂದರೆ ಗೌರನ ಕತೆನೆಲ್ಲ ಅವಳೊಟ್ಟಿಗೆ ಹೇಳೊಕೂಂತ ಮಾದಪ್ಪಂಗೆ ಮನಸಿತ್ತ್. ಆದರೆ ಅವ್ಳು ಕಟ್ಲೆ ದಾಟ ಬಾತ್ಲೆ. ಕಣ್ಣ್‌ನ ಒಮ್ಮೆ ಒರ್ಸಿಕಂಡ್ ಅಪ್ಪನ ನೋಡಿಕಂಡೇ ನಿತ್ತ್ ಬುಟ್ಟತ್.

ರಾಕೇಶ್ ಮತ್ತೆ ರಜನಿ ಆಗಳೂ ಆಡಿ ಕಂಡೇ ಇದ್ದೊ. ಅವು ಮಾದಪ್ಪನ ಕಡೆಗೆ ನೋಡ್ತೇಲೇ. ಆ ಪಿಳ್ಳೆಕ್ಕಳಿಗೆ ತಕಂಡಿದ್ದ ಬಿಸ್ಕೆಟ್ ಪ್ಯಾಕ್‌ನ ಮಾದಪ್ಪ ದಾರಿಲಿ ಸಿಕ್ಕಿದ ಒಂದ್ ಸೇತ್ವೆ ಕೆಳ್ಗೆ ಬಿಸಾಕಿತ್. ಅದ್ ನೀರ್‌ಲಿ ತೇಲಿಕಂಡ್ ಹೋತ್. ಮನೆಗೆ ಅಂವ ತಲಪುಕಾಕನ ಗಂಟೆ ಎಂಟ್ ಆಗಿತ್ತ್.

ಊಟ ಮಾಡದೇ ಅಪ್ಪನ ಕಾದ್ ಕಂಡಿದ್ದ ಅಕ್ಕ ತಂಗಿ ಮಾದಪ್ಪ ಕೆಮ್ಮಿದ ಸದ್ದ್ ಕೇಳಿ ಬಾಗ್ಲ್ ತೆಗ್ತ್.

'ಅಪ್ಪಾ. ಬಾವನ ಕುಂಬಕೆ ಸಿಕ್ತಾ ? ಹೋದ ಕಾರ್‌ಬಾರ್ ಏನಾತ್ ?'

'ಓ...ಅಕ್ಕಂಗೆ ಈಗ ದುಡ್ಡ್‌ದ್ ವಿಷ್ಯ ಗೊತ್ತಾಕು ಅಪ್ಪಾ. ರಾಕೇಶ್ ಮತ್ತೆ ರಂಜನಿ ಹೆಂಗೊಳೊ. ಅಕ್ಕ ಏನ್ ಹೇಳ್ತ್? ಮಕ್ಕ ನಮ್ಮನ್ನ ಕೇಳ್ದೊ ?'

ಮೀರಾ ಅಪ್ಪನೊಟ್ಟಿಗೆ ಕೇಳ್ತ್.

ಹೂಂ ಎಲ್ಲವು ನಿಮ್ಮನ್ನ ಕೇಳ್ದೊ. ನಾನ್ ಅಲ್ಲಿಂದ ಹೊರಡೊನರೆಗೂ ಮಕ್ಕ ನನ್ನೊಟ್ಟಿಗೇ ತಬ್ಬಿಕಂಡೇ ಇದ್ದೊ. ತಾಂನ ಮಾವನೂ, ಗಂಡನೂ ಹಣದ ವಿಷಯಲಿ ಸೊಲ್ಪ ತಲೆಬಿಸಿ ಮಾಡಿ ಕಂಡಿದ್ದೊ. ಅದರ್ನ ನೋಡಿ ನಂಗೆ ದುಡ್ಡ್ ಕೇಳಿಕೆ ಮನಸ್ ಬಾತ್ಲೆ. ನಾನ್ ಒಂದು ಏಕರೆ ಜಾಗನ ಮಾರ್ನಿ ಮಕ್ಳೀ ಬಾಕಿ ಇರೋ ಒಂದ್ ಏಕರೆ ಸಾಕ್.

ಆ ಅಕ್ಕ ತಂಗೆ ಅಪ್ಪನ ನೋಡಿಕಂಡೆ ನಿತ್ತ್ ಬುಟ್ಟೊ.

ಹೇಳ್ದ ದಿನನೇ ಎಂಗೇಜ್‌ಮೆಂಟ್ ಆತ್. ಫ್ಯಾಕ್ಟ್ ಮಾದಯ್ಯನ ಸಾಕ್ಷಿ ನಿಲ್ಸಿ ಬುಟ್ಟ್ ಮಾದಪ್ಪ ದೇವಯ್ಯಂಗೆ ನಲವತ್ತ್ ಸಾವ್ರ ರೂಪಾಯಿ ಕೊಟ್ಟತ್.

'ಇದೆಲ್ಲ ಯಾಕೆ ಮಾದಪ್ಪಾ, ನಾನೀಗ ನಿನ್ನಕ್ಕಲೆ ಹಣ ಏನೂ ಕೇಳ್‌ತ್‌ಲೆಲ್ಲ?

ಬೋರ್‌ಗುಡ್ಡೆ ದೇವಯ್ಯ ಹೇಳ್ತ್.

ಮೊದ್ವೆಗೆ ಬೇಕಾದ ಎಲ್ಲ ವ್ಯವಸ್ಥೆ ಆತ್ ಚಿನ್ನ–ಬಣ್ಣ ತೆಗಿಯಕೆ ಮಾದಪ್ಪನೂ ಮಕ್ಕಳ್ನೂ ದೇವಯ್ಯ ತನ್ನ ಕಾರ್‌ಲೇ ಕರ್ಕಂಡ್ ಹೋತ್.

ಗೌರಂಗೆ ಕುತ್ತಿಗೆ ಕೈ ಅಲ್ಲಾಡ್ಸಿಕೆ ಆಗದಷ್ಟ್ ಒಡವೆಗಳನ್ನ ದೇವಯ್ಯ ತೆಗ್ಸಿ ಕೊಟ್ಟತ್.

'ನನ್ನ ಸೊಸೆ ಆಗೌವ್ಳು ನನ್ನ ಸಂಪತ್ತಿಗೆ ಸೆರಿಯಾಗಿರುವವಳಾಗಿರೊಕು'

ದೇವಯ್ಯ ಹೇಳ್ತ್.

ಇಡೀ ಊರ್‌ಗೆ ಮೊದ್ವೆ ಕಾಗದ ಕೊಟ್ಟತ್.

ಮೊದ್ವೆ ದಿನ ಬಂದೇ ಬುಡ್ತ್.

[ಸಶೇಷ]

## ಹಾಸ್ಯ ಲೇಖನ

ಪೊಲೀಸ್ ಕಾನ್ಸ್‌ಟೇಬಲ್ ಕೃಷ್ಣನು ಮತ್ತೆ ಅವನ ಹೆಣ್ಣ್ ರಾಧ ಇಬ್ಬರು ರಾತ್ರಿ ಊಟ ಮಾಡಿ ಮಲ್ಗಿದೊ. ಕೃಷ್ಣಂಗೆ ಒಳ್ಳ ನಿದ್ರೆ ಹತ್ತಿತ್. ರಾಧ ಇನ್ನೂ ನಿದ್ದೆ ಮಾಡಿತ್ತ್‌ಲೆ. ಅಷ್ಟೊತ್ತಿಗೆ ಯಾರೋ ಕಳ್ಳರ್ ಕದಿಯಕೆ ಬಂದಂಗೆ ಸದ್ದ್ ಕೇಳ್ತ್. ಗಂಡನ ಎಳ್ಸಿದೆ. ಆಗ ಕೃಷ್ಣ ಸುಮ್ಮನೆ ಮಲಗ್‌ನೆ. ಇಷ್ಟೊತ್ತಿಗೆ ಯಾಕ ಎಳ್‌ಸ್ದು. ನಾಳೆ ಆಗಲಿತಾ ಹೇಳ್ತ್. ಹಂಗೆ ಅಲ್ಲ, ಕಳ್ಳರ್ ಸಾಮಾನ್‌ಗಳ್ನೆಲ್ಲಾ ಹೊತ್ತ್‌ಕಂಡ್ ಓಡ್‌ತೊಳೊ ತೇಳಿ ಪುನಃ ಕರ್ದದೆ. ಕೃಷ್ಣ ಹೇಳ್ತ್, ನೀನ್ ಸುಮ್ಮನೆ ಮಲಗ್ 'ನನ್ನ ಡ್ಯೂಟಿ ಬೆಳಿಗ್ಗೆ ಎಂಟ್ ಗಂಟೆಂದ ಸಾಯಂಕಾಲ ಆರ್‌ಗಂಟೆವರೆಗೆ ತೇಳಿ ಗುಡಿಹೊದ್ದ್ ಮಲಗಿತ್. ರಾಧ ಬೊಬ್ಬೆ ಹಾಕಿ ಊರವರ್ನೆಲ್ಲಾ ಎಳ್ಸಿ ಕಳ್ಳರ್ನ ಹಿಡ್ದ್ ಪೊಲೀಸ್‌ಗೆ ಒಪ್ಸಿ ಕಳ್ಳರ ಹಿಡಿಯದ ಪೊಲೀಸ್ [ಗಂಡನ] ಮೇಲೆ ಸ್ಟೇಷನ್‌ಲಿ ಕಂಪ್ಲೆಂಟ್ ಕೊಟ್ಟತ್.

—ಚಂಡೀರ ಸುಮಿತ್ರ ಅಪ್ಪಾಜಿ
ಕೋಕೇರಿ.

# ಮಣಿನೂ ಹಂದಿ ಮರಿನೂ....

ಒಂದ್ ಒಳ್ಳೆ ಜಾತಿ ಗಂಡ್ ಹಂದಿ ಸಾಂಕೊಕುತ ಮಣಿ ಗ್ಯಾನ ಮಾಡ್ತ್. ಆದ್ರೆ ಅಂಥಾ ಮರಿ ಎಲ್ಲಿ ಸಿಕ್ಕಿದೆ? ಅವ್ರ ಇವ್ರಲ್ಲೆಲ್ಲಾ ಕಂತ್ರಿ ಹಂದಿಗಳೇ ಇರ್ದು. ಸೀದ ಕೂಡಿಗೆಗೆ ಹೋದೇ ಸರಿಂತ ಗ್ಯಾನ ಮಾಡ್ತ್. ಯಾರೋ ಹೇಳ್ತಿದ್ದೊ 'ಕೂಡಿಗೆಲಿ ಒಂದೊಂದ್ ಹಂದಿಗ ಕೋಣ ಮರಿಗಳಂಗೆ ಬೆಳ್ದವೆ. ಒಂದ್ ಗೂಡಿಗೆ ಒಂದೇ ಹಂದಿ ಸಾಕ್, ನೀ ಅಂಥರ್‌ನೇ ಸಾಕ್‌ಂತ.' ಈ ಮಾತ್ ಕೇಳಿ ಮಣಿದ್ ಕೆಮಿ ಅರಳಿತ್, ಕೂಡಿಗೆಯತ್ತ ಮನಸ್ಸ್ ಹೊರ್‌ಳಿತ್. ಗೋಣಿ ಚೀಲ ತಕಂಡ್ ಹೊರ್ಟತ್. ಮಣಿದ್ ಊರ್ ಪಾಲೂರ್. ಪಾಲೂರೆಲ್ಲಿ, ಕೂಡಿಗೆ ಎಲ್ಲಿ?

---

**ಬಿ. ಆರ್. ಜೋಯಪ್ಪ, ಮದೆ**

---

ಹಠವಾಧಿ ಮಣಿ ಕೂಡಿಗೆಗೆ ಹೋತು. ಅಲ್ಲಿ ಹಂದಿ ಮರಿಗಳ್ನ ನೋಡ್ರೆ ಹೊಟ್ಟೆ ತುಂಬಿದಂಗೆ ಆಗೋತು. ಯಾವುದರ ಹಿಡಿಯೊದು, ಯಾವುದರ ಬುಡ್ದು? ಅಂತೂ ಇಂತೂ ಒಂದರ ಆಯ್ಕೆ ಮಾಡಿ ಹಿಡ್ದ್ ಕಾಲ್‌ಕಟ್ಟದೆ ಚೀಲಕೆ ತುಂಬಿಕಂಡತ್. ದುಡ್ಡ್‌ಕೊಟ್ಟತ್. ನೇಚಿ ಹೆಗಲ್‌ಲಿ ನೇತಲಾಡಿಸಿಕಂಡ್ ರಸ್ತೆ ಕರೆಗೆ ಬಾತ್. ಯಾವ್ದಾರ್ ವ್ಯಾನ್‌ಗೀನ್ ಸಿಕ್ಕ್ಯದಾತ ಪಾರ ಕಾತ್. ಒಂದ್ ವ್ಯಾನ್‌ಲಿ ಕುಶಾಲನಗರ ಮುಟ್ಟ ಬಾತ್. ಅಲ್ಲಿಂದ ಮುಂದೆ ಹೆಂಗೆ ಹೋದು?

ಬಸ್‌ನವು ಹಾಕಂಬಕಿಲ್ಲೆ. ಲಾರಿಯವೂ ಅಷ್ಟೇ. ಅಂತೂ ನೋಣ್ನೋಂತೇಳಿ ಜನರ ನೂಕಾಟಲಿ ಒಂದ್ ಬಸ್‌ಗೆ ಹತ್ತಿ ಹಿಂದೆ ಸೀಟ್‌ಲಿ ಕುದ್ದ್‌ಕಂಡತ್. ಮಡಿಕೇರಿಗೆ ಟಿಕೇಟ್ ತಕ್ಕಂಡತ್. ಕೆಳಗೆ ಹಂದಿ ಮರಿ, ಮೇಲೆ ಮಣಿ. ಆಚೆ ಈಚೆ ಯಾರ್ಯಾರೋ ಕುದ್ದೊಳೊ. ಬಸ್ ಹೊರಡ್‌ಕನ ಹಂದಿ ಮರಿ ಸಣ್ಣದಾಗಿ 'ಗುರ್,ಗುರ್' ಸುರ್‌ಮಾಡ್ತ್. ಬಸ್‌ನ ಸದ್ದ್‌ಲಿ ಈ ಸದ್ದ್ ಯಾರಿಗೂ ಗೊತ್ತಾತ್‌ಲೆ. ಬಸ್ ತಾವರೆ ಕೆರೆ ದಾಟಿ, ಮರ ಮಿಲ್ಲ್ ದಾಟಿ ರುಮ್ಮ್‌ಂತ ಹೋಗ್ತಾ ಇರ್ಕನ ಯಾವನೋ ಒಬ್ಬ ಹಂದಿ ಮರಿ ಇರುವ ಚೀಲನ ಮೆಟ್ಟಿಬುಡ್ತ್. ಕಿರಿಂಯೋಂತ ಮರಿ ಕಿರ್‌ಚ್‌ಕನ ಆಚೆ ಈಚೆ ಇದ್ದವು ಹದ್ಕಿ ಹದ್ಕಿ ಬಿದ್ದ್ ಎದ್ದ್ ನಿತ್ತೊ. ಮಣಿ ಮಿಣಿ ಮಿಣಿ ಕಣ್ಣ್ ಮಾಡಿಕಂಡ್ ಏನೂ ಆಗದವನಂಗೆ ಕುದ್ದ್‌ಕಂಡಿತ್ತ್. 'ಇದ್ರ ದೊಂಡೆ ಕಟ್ಟ್‌ಕೆ, ಸತ್ತಂಗೆ ಬಿದ್ದ್‌ಕಂಬಕ್ಕೇನ್ ರೋಗ ಇದ್ದ್ಯತ' ಬಯ್ಯಂಡತ್. ಅಷ್ಟೊತ್ತಿಗೆ ಕಂಡಕ್ಟರ್ ಹಂದಿಗಿಂತ್ಲೂ ಜೋರಾಗಿ ಕಿರ್‌ಚಿಕ್ಕಂಡ್ ಜನ್ರ ಸೀಳಿಕಂಡ್ ಸೀಳಿಕಂಡ್ ಈಜಿಕಂಡ್, ಈಜಿಕಂಡ್ ಬಂದಂಗೆ ಬಂದೇ ಬುಡ್ತ್ 'ಯಾರ್‌ದ್ರಿ ಆದೂಂತ' ದಪ್ಪ ಗೊಂಡಲಿ ಕೇಳ್ತ್. ಬಸ್ ನಿತ್ತೇಹೋತು.

'ಇಳ್‌ಸ್ರೀ ಅವುನ್ನ, ಇದೇನ್ ಬಸ್ಸೋ ಗೂಡ್ಸ್ ಲಾರಿಯೋಂತ' ಡ್ರೈವರ್ ಬಯ್ದಾಡ್ಕನ ಪಾಪದವನಂಗೆ ಕುದ್ದ ಮಣಿ ಚೀಲ ತಕ್ಕಂಡ್ ಬಸ್‌ಂದ ಇಳ್ದೇ ಬುಡ್ತ್. ಜನ ಕಿಡಿಕೆಂದ ತಲೆ ಹಾಕಿ ನೋಡ್ತಾ ಇದ್ದೊ. ಕಂಡಕ್ಟರ್ ಡಬ್ಬಲ್ ಸದ್ದ್ ಬರ್‌ವಂಗೆ ಪೀಪಿ ಊದಿತ್. ಬಸ್ ಬುಸುಗುಟ್ಟ್ ಹೊರ್ಟತ್. ಮಣಿ ಹಂದಿ ಮರಿನ ಹಾಕಂಡ್ ರಸ್ತೆ ಕರೆಲಿ ಕುಕ್ಕುರ್ಸಿ ಕುದ್ದತ್.

ಹಿಂದೆ ಕುದ್ದ್‌ಕಂಡಿರ್ಕನ ಒಂದರ ಹಿಂದೆ ಇನ್ನೊಂದ್, ಮತ್ತೊಂದ್ ಲಾರಿ ಬರ್ತಾ ಇತ್ತ್. ಮಣಿ ಕೈ ಅಡ್ಡ ಹಿಡ್ತ್, ಕ್ಲೀನರ್ ಎಡಗೈ ಕುಣ್ಸಿತ್. ಮಣಿ ಇಸ್ಕೂಲ್ ಮಕ್ಕ ಬಸ್ಕಿ ಹೊಡ್ದಂಗೆ ಏಳುದು, ಕೂರುದು ಮಾಡ್ತಾ ಇತ್ತ್. ಅಷ್ಟೊತ್ತಿಗೆ ಇನ್ನೊಂದ್ ಲಾರಿ ಬಾತ್. ಕೈ ಅಡ್ಡ ಹಿಡ್ತ್. ಲಾರಿ ನಿತ್ತತ್. ಹತ್ತಿ ಕುದ್ದ್‌ಕನ ಲಾರಿಯವು ದುಡ್ಡ್ ಕೇಳ್ದೊ. ಕೊಟ್ಟತ್. ದುಡ್ಡೆಲ್ಲಾ ಕೊಟ್ಟ್ ಇನ್ನೇನ್ ಗುಡ್ಡೆಹೊಸೂರ್‌ಗೆ ಬಾತೋ ಇಲ್ಲೆಯೋ ಹಂದಿ ಮರಿ ಮಿಸ್‌ಕಾಡ್ತ್. ಸಣ್ಣದಾಗಿ ಗುರ್ ಗುಟ್ಟತ್. 'ಥೂ...ಇದೆಂತದ್‌ರ್ರೀ...ಂತ' ಲಾರಿ ಕ್ಲೀನರ್ ಕೇಳ್ತ್. ಆಗ ಮಣಿ 'ಅದೂ.. ಅದು...ಇದೂ... ಇದು...' 'ಏನ್ರೀ ಮಾತು ಬರಕಿಲ್ಲೇನ್ರೀ...ಅದೂ ಇದು, ಇದೂ ಅದುಂತ ಹೇಳ್ತೀರಲ್ಲ. ಚೀಲ್ದೊಳಗಿರೋದೇನ್ರಿ? ಸರಿಯಾಗಿ ಹೇಳ್ರೀಂತ' ಡ್ರೈವರ್ ಬೊಬ್ಬೆ ಹಾಕ್‌ಕಾಕನ ಹಂದಿ ಮರಿಗೆ ಹೆದ್ರಿಕೆ ಆಗಿಯೋ ಏನೋ ಕಿರಿಂಯೋಂತ ಕಿರ್‌ಚಿಕಂಡತ್. ಡ್ರೈವರ್ ಮೈಮೇಲೆ ಹಾಂವು ಬಿದ್ದಂಗೆ ಆಡಿ ಲಾರಿನ ನಿಲ್ಸಿ ಮಣಿನ ಕುತ್ತಿಗೆ ಪಟ್ಟೆ ಹಿಡ್ದ್ ಕೆಳಗೆ ತಳ್ಳಿದೊ. ಮಣಿ ಮೊಕ ಪೂಜಿಕಂಡ್ ಚೀಲ ಹಾಕಂಡ್ ಕುದ್ದತ್. ಅಲ್ಲಿಂದ ಮುಂದೆ ಒಂದೇ ಒಂದ್ ಲಾರಿಯಾಗಲಿ, ವ್ಯಾನಾಗಲಿ ನಿತ್ತತೇ ಇಲ್ಲೆ. ಇನ್ನೇನ್ ಮಾಡ್ದು? ಕತ್ತಲೆ ಬೇರೆ ಆಗ್ತಾ ಉಟ್ಟು. ಮಳೆ ಮೋಡ ಬೇರೆ. ಇನ್ನ್ ನಡೇದೇ ಸರಿತ ನಡೆಕೆ ಸುರ್ ಮಾಡ್ತ್. ಶುಂಠಿಕೊಪ್ಪ ಹೊಟೇಲ್‌ಲಿ ಏನೋ ತಿಂತ್. ಮರಿ ಮಾತ್ರ ಉಪಾಸ. ಮತ್ತೆ ಅಲ್ಲಿಂದ ಹೊರ್ಟತ್. ಬೋಯಿಕೇರಿಗೆ ಎತ್ತಿಕಾಕನ ಹಿಂದೆಂದ ಒಂದ್ ಲಾರಿ ಬಾತ್. ಕೈ ಅಡ್ಡ ಮಾಡ್ಕನ ನಿತ್ತತ್. ಆ ಲಾರಿಯವು ಗೊತ್ತಿರವೇ. ಸದ್ಯ ಬಚಾವಾದೆತ ಮಣಿ ಹತ್ತಿ ಕುದ್ದ್ ಮೀಸೆ ಮೇಲೆ ಕೈ ಆಡ್ಸಿತ್. ಲಾರಿಯವುಕೆ ದುಡ್ಡ್ ಕೊಡಿಕೆ ಹೋದರೆ ಅವು ತಕ್ಕಂಡ್‌ತ್ಲೆ. ಲಾರಿ ಗದ್ದೆ ಹಳ್ಳ ದಾಟಿ ಬೋಯಿಕೇರಿ ಚಡಾವು ಎತ್ತಿತ್. ಆ ದೊಡ್ಡ ತಿರ್‌ಗಾಸ್‌ಲಿ ಒಂದ್ ಲಾರಿ ಕಾಲ್ ಮೇಲೆ ಮಾಡಿಕಂಡ್ ಉಪ್ಪು ಟೀ ಟೀ ಹಕ್ಕಿ ಮಲ್‌ಗಿದಂಗೆ ಮಲ್‌ಗಿತ್ತ್. ಕೆಳಗೆ

ಹಂಚಿ ಮೇಲೆ ಲಾರಿ. ಅದೆಲ್ಲಾ ನೋಡಿಕಂಡ್ ಈ ಲಾರಿ ಬುರೂಂತ ಹೋಗ್ತಾ ಇತ್ತ್. ಏನಾತೋ ಏನೋ. ಈ ಲಾರಿ ಸೊಲ್ಪ ದೂರ ಎತ್ತಿದ ಮೇಲೆ ಬುರ್ ಬುರೂಂತ ಸದ್ದ್ ಮಾಡ್ದಲ್ಲದೆ ಏನೇನ್ ಮಾಡಿರೂ ಮುಂದೆ ಹೋಕಿಲೆ. ಕ್ಲೀನರ್ ಹೈದ ಇಳ್ದ್ ಚಕ್ರಕ್ಕೆ ಕಟ್ಟೆ ಕೊಟ್ಟತ್. ಲಾರಿ ಪುನಾ ಸದ್ದ್ ಮಾಡ್ತ್. ಗಡಗಡ ಸದ್ದ್ ಮಾಡಿ ಗಡಕ್‌ಂತ ನಿತ್ತೇ ಹೋತು. ಮಾಣಿ ಮೀಸೆಂದ ಕೈ ತೆಗ್ತ್. ಚೀಲ ತಕ್ಕಂಡ್ ಇಳ್ತ್. ಲಾರಿಯವುಕೆ ಸಮಾಧಾನ ಹೇಳಿ ನಡೆಕೆ ಸುರ್ ಮಾಡ್ತ್. ಒಂದ್ ಹತ್ತ್ ಮಾರ್ ನಡ್ತೋ ಇಲ್ಲೆಯೋ ಎಲ್ಲಿದ್ದೋ ಏನೋ ಎರಡ್ ನಾಯಿಗ ಬೊಗಳಿಕಂಡ್ ಬಂದೇ ಬುಟ್ಟೊ. ಮಣಿನ ಹಿಂದೆ ಮುಂದೆ ಸುತ್ತ್ತಾ ಒಳೊ. ಹಸ್ ಕರ್ ಹಾಕ್‌ಕಾಕನ ಸುತ್ತ ಮುತ್ತ ತಿರ್‌ಗೊಂಗೆ ಮಣಿ ಚೀಲನ ಹೊತ್ತ್‌ಕಂಡ್ ಅತ್ತ ಇತ್ತ ತಿರ್‌ಗಾಡ್ತಾ ಇತ್ತ್. ಅಪ್ಪೊಟ್ತಿಗೆ ಸರಿಯಾಗಿ ಮರಿ ಹುಟ್ಟಿಕಾಕನ ಸುರೂಲಿ ಮುಂದೆದ್ ಕಾಲ್ ಹೊರಗೆ ಬರುವ ಹಂಗೆ ಮಣಿದ್ ಚೀಲದ ಮೂಲೆಂದ ಹಂದಿ ಮರಿದ್ ಕಾಲ್ ದಾಟಿಕಂಡತ್. ಚೀಲ ಕುಂಬಾಗಿತ್ತ್ ನೋಡಿ. ಮಣಿ ಯಾಕೋ ಚೀಲನ ನೋಡ್ಕನ ಕಾಲ್ ಒಟ್ಟಿಗೆ ಮರಿದ್ ದುಂಡು ಹೊರಗೆ ಬರ್ತಾ ಉಟ್ಟ್. ಹಾಳಾದ ನಾಯಿಗ ಬೇರೆ. ಇನ್ನೇನ್ ಮರಿ ಚೀಲಂದ ಹೊರಗೆ ಬೀಳಿಕೇ ಬಾಕಿ ಇರ್ದ್. ತಕ್ಷಣ ಆ ತೂತದ ಕಡೆ ಹಿಡ್ದ್ ಮರಿನ ಉಂದಿ ಒಳಗೆ ಹಾಕಿತ್. ಹೆಂಗೋ ಗಂಟ್ ಹಾಕಿತ್. ಆ ನಾಯಿಗ ನಾಲಿಗೆ ನೆಕ್ಕಿಕಂಡ್ ಬೊಗುಳ್ತಾ ಒಳೊ. ಮಣಿ ಕೂಡ್ಲೆ ಬಗ್ಗಿದಂಗೆ ಮಾಡಿ ಎಂಥದೋ ಎತ್ತಿದಂಗೆ ಮಾಡಿ ನಾಯಿಕಡೆ ಬಿಸಾಕಿದಂಗೆ ಮಾಡ್ಕನ ನಾಯಿಗ ಹೆದ್ರಿಕಂಡ್ ಅತ್ತ ಹೋದೊ. ಹಂಗೂ ಹಿಂಗೂ ಮಡಿಕೇರಿ ಸುದರ್ಶನ ಸರ್ಕಲ್ ಹತ್ರ ಎತ್ತಿಕಾಕನ ರಸ್ತೆಲಿ ದೀಪ ಬೆಳಗ್ತಾ ಇತ್ತ್. ಅಪ್ಪೊಟ್ತಿಗೆ ಒಬ್ಬ ಮರದ ಬುಡಾಂದ ದಡ್‌ಬಡ್‌ತ ಓಡಿ ಇವನ ಹತ್ರ ಬಾತ್. ಕೈಲಿ ದೊಣ್ಣೆ, ಕಾಲ್‌ಲಿ ಬೂಟ್ ತಲೆಗೆ ಎಂತದೋ ಸುತ್ತಿಕಂಡ ಆ ಮನುಷ್ಯ ಮಣಿನ ಹತ್ತ ಬಂದ್ 'ಏಯ್ ಏಯ್ ಏನೋ ಅದು ? ಕಳ್ಳತನ ಮಾಡಿದ್ದೇನೊಂತ' ಜಬರದಸ್ತ್ ಮಾಡ್ತ್. ಆಗ ಮಣಿ 'ಸಾರ್ ಇದು ಹಂದಿ ಮರಿ ಸಾರ್. ಕೂಡಿಗೆಂದ ತರ್ತಾ ಇದ್ದೀನಿ ಸಾರ್. ಬುಟ್ಟ್ ಬುಡಿ ಸಾರ್, ನಿಮ್ಮ ದಮ್ಮಯ್ಯ ಸಾರ್‌ಂತ' ಬೇಡಿಕಂಡತ್. ಏಯ್ ತೆಗಿಯೋ ರಶೀತಿಂತ ಅಂವ ಹೆದ್ರಿಸಿತ್. ಹಂದಿ ಮರಿಗೆ ಯಾರ್ ರಶೀತಿ ಕೊಟ್ಟವೆ ಹೇಳಿ ? 'ಸ್ವಾಮಿ, ರಶೀತಿ ಇಲ್ಲ' ಓಹೋ ನೀನ್ ಕಳ್ಳನೇ ಹೌದು. ಒದ್ದ್ ಒಳಗಾಕ್ತೇನಿಂತ ಆ ದಫೂತಿ ಆಸಾಮಿ ನೆಲಕ್ಕೆ ಒದ್ದ್ ದೊಣ್ಣೆ ಎತ್ತಿತ್. ಮಣಿ ಜೋಬಿಗೆ ಕೈ ಹಾಕಿ ಬಂದಷ್ಟ್ ದುಡ್ಡ್‌ನ ಮುದ್ದೆ ಮಾಡಿಕೊಟ್ಟತ್. ಹೋಗ್ ಇನ್ನೊಮ್ಮೆ ಕದ್ದ್ ಸಿಕ್ಕಿ ಹಾಕೋಬ್ಯಾಡಂತ ಬುದ್ಧಿ ಹೇಳ್‌ಕನ ಮಣಿ ಆಯಿತು ಆಯಿತುಂತ ಹೇಳಿ ಚೀಲ ನೇಚಿಕಂಡ್ ಮರ್ಟ್‌ಕಂಡ್ ಹೊರ್ಟತ್. ಸುತ್ತ ಯಾರೂ ಇತ್ತ್‌ಲೆ. ಗಂಡ್‌ಜನ ಮರ್ಟವೆಯಾ ? ದುಃಖಕ್ಕೆ ಗಂಡ್ ಹೆಣ್ಣ್ ಭೇದ ಉಟ್ಟಾ ?

ಮಣಿ ಬೆಟ್ಟಗೇರಿ ರಸ್ತೆಲಿ ನಡಿತಾ ಇತ್ತ್. ಚೀಲ ಹೆಜ್ಜೆ ಹೆಜ್ಜೆಗೂ ತೂಕ ಜಾಸ್ತಿ ಆದಂಗೇ ಆತ್ತ್. ಎಲ್ಲಾ ಅಷ್ಟೇ. ಸುರೂಲಿ ಹಗುರ ಕಂಡದೆ, ಮತ್ತೆ ಮತ್ತೆ ತೂಕ ಜಾಸ್ತಿ. ಕೆಲವುಕೆ ಸಂಸಾರದ ತೂಕ ದಿನಂದ ದಿನಕ್ಕೆ ಜಾಸ್ತಿ ಆದಂಗೆ, ಮಣಿದ್ ಚೀಲನೂ... ●

## ನ ಗೆ ಹ ನಿ

ನಮ್ಮ ನೆರೆಮನೆ ಚಾಂಪಂಗೆ ಕಾಯಿಲೆ ಸೀರಿಯಸ್ ಆಗಿ ಬಾಡೆಗೆ ತಂದ್ ಹಾಕಿದ್ದೊ. ಆಗ ನನ್ನ ಸಣ್ಣ ಮಗ್ಳು ಕೇಳ್ತ್. 'ಯಾಕೆ ಪಪ್ಪಾ ಅಜ್ಜನ ಬಾಡೆಗೆ ತಂದ್ ಹಾಕಿದ್.' ಅದ್ಕೆ ನಾನ್ ಹೇಳ್ದೆ ಸಾಯಕಾಕನ ಕಾಯಲೆಲಿ ಇದ್ದವರ್ನ ಕಟ್ಲ್‌ಲಿ ಮಲ್ಗಿಸುದುಲೆ. ಅದ್ಕೆ ಬಾಡೆಗೆ ತಂದ್ ಹಾಕಿದ್.

ಸ್ವಲ್ಪ ದಿನ ಕಳ್ದ ಮೇಲೆ ಒಂದು ದಿನ ನಮ್ಮ ಫ್ರಿಡ್ಜ್‌ನ ಪ್ಲಗ್ ಪಾಯಿಂಟ್ ಹಾಳಾಗಿತ್ತ್. ಅದ್ಕೆ ಫ್ರಿಡ್ಜ್‌ನ ಬಾಡೆಗೆ ತಂದ್ ಹಾಕಿದೊ. ಆಗ ಸಣ್ಣ ಮಗ್ಳು ಬಂದ್ 'ಪಪ್ಪಾ, ಯಾಕೆ ಪಪ್ಪ ಫ್ರಿಡ್ಜ್‌ನ ಬಾಡೆಗೆ ತಂದ್ ಹಾಕಿದ್, ಅದ್ ಸಾಯಕ್ಕೆ ಆಗುಟ್ಟಾತ ಕೇಳ್ತ್.

ನಾನ್ ಎಂತರ ಹೇಳ್ದು ?

—ಪೂಜಾರೀರ ಗೋಪಾಲ, ಬೆಂಗಳೂರು.

## ಗಾ ಳಿ ಪ ಟ

ಪ್ರೀತಿಯ ಗಾಳಿ ಪಟನ
ಆಕಾಶದ ಕಡೆಗೆ ಹಾರ್ಸಿಕೆ ತೇಳಿ
ಪ್ರೇಮದ ನೂಲುನ ಕಟ್ಟಿ
ಮುಗಿಲೆತ್ತರಕ್ಕೆ ಹಾರ್ಸಿ ಬುಟ್ಟ್
ಸಿಟ್ಟ್‌ಂದ ಸಿಡ್ಕ್ಯಾಡಿ ನೂಲುನ ತುಂಡು ಮಾಡಿ
ನನ್ನ ಮಾಡ್ದಲ್ಲಾ ನೀ ಧೂಳಿ ಪಟ

—ತೆಕ್ಕಡ ಬಿ. ಕುಮಾರ, ಮುತ್ತಾರ್ಮುಡಿ.

## ಹನಿಗವನಗ

ಏಯ್ ! ಗೂಡೆ ನೀನ್ ಬಲು ಬೆಪ್ಪು
ಮಳೆಲಿ ನೆಂದದ್ ನಿನ್ನ ತಪ್ಪು
ಇದಂರ್ದ ಹೋತ್ ನಿನ್ನ ಮೇಕಪ್ಪು
ಕಂಡತ್ ನಿನ್ನ ಒರಿಜಿನಲ್ ಬಣ್ಣ ಕಪ್ಪು

—ಗೋವಿಂದಮ್ಮನ ಅ. ಪ್ರವೀಣಕುಮಾರ.



# ಚಿರಸ್ಮರಣೆ

## ನಂಗಾರು ಅಪ್ಪಣ್ಣ ಸೋಮಪ್ಪ

**ಜನನ : 30-3-1901 ಮರಣ : 20-11-1975**

ಭಾಗಮಂಗಲನಾಡಿನ ನಂಗಾರು ಮೇಲಿ ಮನೆಯಲ್ಲಿ "ದೊಡ್ಡಣ್ಣ" ಎಂದೇ ಕರೆಯಲ್ಪಟ್ಟು ಗೌರವಾನ್ವಿತ ಸ್ಥಾನ ಗಳಿಸಿದ ನಂಗಾರು ಸೋಮಪ್ಪನವರು ಶ್ರೀಮತಿ/ಶ್ರೀ ನಂಗಾರು ಅಪ್ಪಣ್ಣ ಮತ್ತು ದೇವಮ್ಮನವರ ಏಕಮಾತ್ರ ಪುತ್ರರಾಗಿ 1901ನೇ ಇಸವಿಯಲ್ಲಿ ಜನಿಸಿದರು. ಇವರ ತಂದೆ ಅಪ್ಪಣ್ಣನವರು ಆಗಿನ ಕಾಲದಲ್ಲಿ ಮನೆಯಲ್ಲೇ ನಡೆಸುತ್ತಿದ್ದ "ಕೈಶಾಲೆ" ಉಪಾಧ್ಯಾಯರಾಗಿದ್ದರು. ಅಪ್ಪಣ್ಣನವರ ಪತ್ನಿ ಪಟ್ಟಡ ಬಿದ್ದಪ್ಪನವರ ತಂಗಿ ದೇವಮ್ಮ. ಸೋಮಪ್ಪನವರು ತನ್ನ ಪ್ರಾಥಮಿಕ ಶಿಕ್ಷಣವನ್ನು ಬೆಟ್ಟಗೇರಿಯ ಮಿಡ್ಲ್ ಸ್ಕೂಲ್‌ನಲ್ಲಿ [ಅಂದು ಪಟ್ಟಡ ಸ್ಕೂಲ್] ತನ್ನ ಸೋದರ ಮಾವನವರಾದ ಪಟ್ಟಡ ಬಿದ್ದಪ್ಪನವರ ಮಾರ್ಗದರ್ಶನದಲ್ಲಿ ಮುಗಿಸಿದರು. ಇವರ ವಿವಾಹವು ಶ್ರೀಮತಿ ನಿಡ್ಯಮಲೆ ಪೊನ್ನಮ್ಮನವರೊಂದಿಗೆ ನಡೆಯಿತು ಇವರಿಗೆ ರಾಮಯ್ಯ ಮತ್ತು ಅಕ್ಕಮ್ಮ ಇಬ್ಬರು ಮಕ್ಕಳು. ಶ್ರೀಮತಿ ಪೊನ್ನಮ್ಮನವರ ಅಕಾಲ ಮರಣದಿಂದಾಗಿ ಉಡುದೋಳಿ ಪೂವಮ್ಮನವರೊಂದಿಗೆ ಮರುವಿವಾಹವಾಯಿತು. ಪೊನ್ನಮ್ಮನವರಿಗೆ ನಾಲ್ಕು ಜನ ಮಕ್ಕಳು. ಪಾರ್ವತಿ, ತಮ್ಮಣ್ಣ, ಚಂಗಪ್ಪ, ಪೊನ್ನಪ್ಪ. ಸೋಮಪ್ಪನವರು ಮುಂದೆ ಮೊಂಣನ ಏಲಕ್ಕಿ ಮಲೆಯಲ್ಲಿ ಮ್ಯಾನೇಜರ್ ಆಗಿ ಕೆಲಸ ನಿರ್ವಹಿಸಿದರು. 1940ನೇ ಇಸವಿಯಲ್ಲಿ ಸೋಮವಾರಪೇಟೆ ತಾಲ್ಲೂಕು ನಾಗವಾಲ ಗ್ರಾಮದಲ್ಲಿ ನೆಲೆಸಿ ಆಗ ದಟ್ಟ ಕಾಡು ಮತ್ತು ಕಾಡುಪ್ರಾಣಿಗಳಿಂದ ಆವೃತವಾಗಿದ್ದ ಜಮೀನನ್ನು ಕಷ್ಟಪಟ್ಟು ಸಾಗುವಳಿ ಕೃಷಿ ಅಭಿವೃದ್ಧಿಯಲ್ಲಿ ಮುಖ್ಯ ಪ್ರಗತಿಯನ್ನು ಸಾಧಿಸಿದರು. ಇವರು ಗಣಗೂರು ಶಾಲೆಯ ಪ್ರಗತಿಗೆ ಮತ್ತು ಎಡಮುಂಡೆ ದೇವಸ್ಥಾನದ ಕೆಲಸಗಳಲ್ಲಿ ಅವಿರತವಾಗಿ ಸೇವೆ ಸಲ್ಲಿಸಿದರು. ದಿವಂಗತರಿಗೆ ತನ್ನ ಮಕ್ಕಳು ಮತ್ತು ಮೊಮ್ಮಕ್ಕಳು ಉತ್ತಮ ಶಿಕ್ಷಣ ಪಡೆಯಬೇಕು ಹಾಗೂ ಸರಕಾರಿ ಉದ್ಯೋಗದಲ್ಲಿ ಅತ್ಯುನ್ನತ ಪದವಿಯನ್ನು ಹೊಂದಬೇಕೆಂಬ ಆಕಾಂಕ್ಷೆಯನ್ನು ಇಟ್ಟುಕೊಂಡಿದ್ದರು. ಮೊಮ್ಮಕ್ಕಳ ಬಗ್ಗೆ ಅಪಾರ ಪ್ರೀತಿ, ವಿಶ್ವಾಸ, ಭರವಸೆ ಹೊಂದಿದ್ದರು.

ನೀವು ಹಾಕಿಕೊಟ್ಟ ಮಾರ್ಗವನ್ನು ಅನುಸರಿಸುತ್ತಾ, ನೀವು ನಮ್ಮನ್ನು ಅಗಲಿ 23 ವರುಷ ಕಳೆದರೂ ನಿಮ್ಮ ನೆನಪು ಸದಾ ನಮ್ಮ ಮನದಲ್ಲಿ ಇನ್ನೂ ಹಸಿರಾಗಿಯೇ ಇದೆ. ನಿಮ್ಮ ಆತ್ಮಕ್ಕೆ ಚಿರಶಾಂತಿಯನ್ನು ಕೋರುವ.

ಮಕ್ಕಳು ಮತ್ತು ಸೊಸೆಯರು

1. **ಶ್ರೀಮತಿ ನಂಗಾರು ಮಾಚಮ್ಮ ರಾಮಯ್ಯ**
2. **ಶ್ರೀಮತಿ ಹೊಸೂರು ಪಾರ್ವತಿ ರಾಮಯ್ಯ**
3. **ಶ್ರೀಮತಿ/ಶ್ರೀ ನಂಗಾರು ಚಂಗಪ್ಪ ಮತ್ತು ಪೊನ್ನಪ್ಪ**

ಮೊಮ್ಮಕ್ಕಳು

1) **ಶ್ರೀಮತಿ/ಶ್ರೀ ನಂಗಾರು ರಾಮಯ್ಯ ನಾಣಯ್ಯ ಮೋಹನ, ನಿಂಗರಾಜು.**
2) **ಶ್ರೀಮತಿ/ಶ್ರೀ ಮೂಲೆಮಜಲು ಯಶೋಧ, ಚಿನ್ನಪ್ಪ.**
3) **ಶ್ರೀಮತಿ/ಶ್ರೀ ವಸಂತಿ, ಪಳಂಗಪ್ಪ, ಮೊದನಪ್ರಿಯ ರಮ್ಯ, ಗೀತಾ, ರೀತಾ, ಗೀತಾ, ರೋದನಪ್ರಿಯ, ದಿಲೀಪ್, ಅಶಿರ, ಆಶಿತ, (ಆಶ್ವಿನ ಅಪ್ಪಣ್ಣ), ಯಶವಂತ ದರ್ಶಿನಿ, ಸ್ಫೂರ್ತಿ, ನವ್ಯ, ಸಾಗರೀಕ.**

K.R.N.N. 240 10-01-96 TCI Kar. 09592

# ಪ್ರಥಮ ವರ್ಷದ ಪುಣ್ಯಸ್ಮರಣೆ



ನೀವು ನಮ್ಮನ್ನಗಲಿ ಇಂದಿಗೆ ಒಂದು ವರ್ಷ ಸಂದಿದೆಯಾದರೂ ಸದಾ ನಿಮ್ಮ ಸವಿನೆನಪು ನಮ್ಮೆಲ್ಲರ ಮನದಲ್ಲಿ ಹಚ್ಚ ಹಸಿರಾಗಿದೆ. ಅಲ್ಲದೆ ನೀವು ಈ ಮೇಲ್ಪಂಕ್ತಿ ಹಾಕಿದ ಮಾರ್ಗದರ್ಶನದಲ್ಲಿ ಮುನ್ನಡೆಯುತ್ತಿರುವ ನಮ್ಮನ್ನೆಲ್ಲಾ ಆಶೀರ್ವದಿಸುದಲ್ಲದೆ, ನಿಮ್ಮ ಆತ್ಮಕ್ಕೆ ಭಗವಂತನು ಸದಾ ಚಿರಶಾಂತಿ ನೀಡಲಿ ಎಂದು ಪ್ರಾರ್ಥಿಸುವ.

**ದಿ|| ಪಾಂಡನ ದೇವಪ್ಪ ಸುಬ್ಬಯ್ಯ**

ಜನನ : **9-7-1915**

ಮರಣ : **12-12-1997**

ಶ್ರೀ ಪಾಂಡನ ಮುದ್ದಪ್ಪ—ಭಾರತಿ ಬೆಂಗಳೂರು
ಶ್ರೀ ಪಾಂಡನ ವಲ್ಲಭಾಯಿ—ಜಯಲಕ್ಷ್ಮಿ ಮೈಸೂರು
ಶ್ರೀ ಪಾಂಡನ ರಾಘವೇಂದ್ರ—ಪದ್ಮಾವತಿ ಮಡಿಕೇರಿ
ಶ್ರೀ ಪಾಂಡನ ರಾಮಚಂದ್ರ—ಲತಾ ಮಡಿಕೇರಿ
ಶ್ರೀ ಪಾಂಡನ ವೆಂಕಟೇಶ್—ಉಷಾ ಬೆಂಗಳೂರು
ಶ್ರೀಮತಿ ಯಶೋದಾ—ಡಾ|| ಗಂಗಾಧರ್ ಬೆಂಗಳೂರು
ಶ್ರೀಮತಿ ಭಾಗ್ಯಲಕ್ಷ್ಮಿ—ಮಂಜುನಾಥ್ ತೀರ್ಥಹಳ್ಳಿ
ಹಾಗೂ ಮೊಮ್ಮಕ್ಕಳು, ನೆಂಟರಿಷ್ಟರು.

Printed by M K Thammaiah and Published byKodagu Sangathi on behalf of Pattada P. Sheelamani and Printed at ASHIRWAD PRINTERS 180/A, 6th Main, Vinayakanagar, Mysore-12 Published at Mysore, Editor PATTADA P. SHEELAMANI, No 35 1st Cross, 4th Block Near Divisional Telephone Office) Jayalakshmipuram, Mysore-570 012 Phone : 516771